

॥ ಧಿಯೋ ಯೋ ನಃ ಪ್ರಚೋದಯಾತ್ ॥





# ಬೋಧಾಯನೀಯ

# ॥ ಸಂಕ್ಷಿಪ್ತಧಾರ್ಮಿಕವಿಧಿಃ ॥

ಪ್ರಕಾಶಕರು

**ಶ್ರೀ ಅಖಿಲ ಹವ್ಯಕ ಮಹಾಸಭಾ (ರಿ) ಬೆಂಗಳೂರು.**

# 101, 11ನೆಯ ಅಡ್ಡರಸ್ತೆ, 8ನೆಯ ಮುಖ್ಯರಸ್ತೆ, ಮಲ್ಲೇಶ್ವರ ಬೆಂಗಳೂರು – 560 003



# ಈ ಹೊತ್ತಿಗೆಯ ಮುಖ್ಯ ಪ್ರಾಯೋಜಕರು

ಶ್ರೀ ಎಂ.ಎನ್.ಭಟ್ಟ, ಮದ್ಗುಣಿ
ನಿಕಟಪೂರ್ವ ಅಧ್ಯಕ್ಷರು, ಶ್ರೀ ಅಖಿಲ ಹವ್ಯಕ ಮಹಾಸಭಾ, ಬೆಂಗಳೂರು
ಮಾಲಿಕರು-ಮೆ॥ ಸೂಪರ್ ಟೆಕ್ ಇಂಡಸ್ಟ್ರೀಸ್, ರಾಜಾಜಿನಗರ, ಬೆಂಗಳೂರು

ಶ್ರೀ ಕೆ.ಎನ್. ಮಂಜುನಾಥರಾವ್
ನಿಕಟಪೂರ್ವ ಗೌರವ ಪ್ರಧಾನ ಕಾರ್ಯದರ್ಶಿಗಳು
ಶ್ರೀ ಅಖಿಲ ಹವ್ಯಕ ಮಹಾಸಭಾ, ಬೆಂಗಳೂರು

ಶ್ರೀ ಸಿ.ಎ. ವೇಣುವಿಘ್ನೇಶ, ಸಂಪ
ಗೌರವ ಕೋಶಾಧಿಕಾರಿಗಳು, ಶ್ರೀ ಅಖಿಲ ಹವ್ಯಕ ಮಹಾಸಭಾ, ಬೆಂಗಳೂರು
ಹಾಗೂ ಲೆಕ್ಕ ಪರಿಶೋಧಕರು, ಬೆಂಗಳೂರು.

ಶ್ರೀ ಟಿ.ಎಲ್. ನರಹರಿ ಭಟ್ಟ
ಶ್ರೀ ಕೃಷ್ಣ ಕಾಂಕ್ರೀಟ್ಸ್, ಬೆಂಗಳೂರು
ಫೋನ್-94480 48351

ಶ್ರೀ ಜಿ. ವಿ. ಹೆಗಡೆ
ಶ್ರೀ ಗುರುಪ್ರಸನ್ನ ಎಂಟರ್‌ಪ್ರೈಸಸ್,
ರಿಯಲ್ ಎಸ್ಟೇಟ್ಸ್, ಬೆಂಗಳೂರು
ಫೋನ್-9845042845



ಸಂಕ್ಷಿಪ್ತ ಧಾರ್ಮಿಕ ವಿಧಿ – ಪ್ರಕಾಶಕರು: ಶ್ರೀ ಅಖಿಲ ಹವ್ಯಕ ಮಹಾಸಭಾ,
ಮಲ್ಲೇಶ್ವರಂ, ಬೆಂಗಳೂರು–560 003

ಮುಖಪುಟ ವಿನ್ಯಾಸ : ಶ್ರೀಕಾಂತ ಹೆಗಡೆ

ಡಿಟಿಪಿ : ವೆಕ್ಟರ್ ಗ್ರಾಫಿಕ್ಸ್
ಶ್ರೀರಾಮಪುರ, ಬೆಂಗಳೂರು–21

ಮುದ್ರಕರು : ಸ್ಟ್ಯಾಂಡರ್ಡ್ ಪ್ರಿಂಟರ್ಸ್
ಬೆಂಗಳೂರು

ಪ್ರಥಮ ಮುದ್ರಣ : 1994
ದ್ವಿತೀಯ ಮುದ್ರಣ : 2011

ದ್ವಿತೀಯ ಮುದ್ರಣಪರಿಷ್ಕೃತರು :
ವಿದ್ವಾನ್ ರಾಮಚಂದ್ರಶರ್ಮಾ, ತ್ಯಾಗಲಿ

ಕ್ರಯ ರೂ. : 50/–

ಸಂಪಾದನೆ : ಧಾರ್ಮಿಕ ಸಮಿತಿ ಸದಸ್ಯರು

ಧಾರ್ಮಿಕ ಸಮಿತಿ ಸದಸ್ಯರು :

1. ವಿದ್ವಾನ್ ಎನ್.ರಂಗನಾಥಶರ್ಮಾ, ಅಧ್ಯಕ್ಷರು
2. ವಿದ್ವಾನ್ ಕೆ.ಎಸ್. ಭಾಸ್ಕರ ಭಟ್ಟರು
3. ವಿದ್ವಾನ್ ರಾಮಚಂದ್ರಶರ್ಮಾ, ತ್ಯಾಗಲಿ
4. ವಿದ್ವಾನ್ ಗಜಾನನ ಜೋಶಿ, ಮಾರ್ಕಂಡೆ
5. ವೇ|| ಬ್ರ|| ಮಂಜುನಾಥಭಟ್ಟರು
6. ಶ್ರೀ ಎದುರ್ಕಳ ಶಂಕರನಾರಾಯಣ ಭಟ್ಟರು
7. ಶ್ರೀ ಎಸ್.ಆರ್. ಭಾಗವತರು (ಸಂಚಾಲಕರು)

ಪರಿಷ್ಕೃತ ಆವೃತ್ತಿಯ ಸದಸ್ಯರು :

1. ವೇ|| ಮೂ|| ಶ್ರೀ ರಾಮಚಂದ್ರ ಭಟ್ಟರು, ಹವ್ಯಕ
2. ವಿದ್ವಾನ್ ಶ್ರೀ ಗಂಗಾಧರ ಬೋಡೆ
3. ಶ್ರೀ ಚಿದಂಬರ ಭಟ್ಟ, ತಲನೀರು
4. ಅಧ್ಯಕ್ಷರು ಹಾಗೂ ಪದಾಧಿಕಾರಿಗಳು ಮತ್ತು ಆಡಳಿತ ಮಂಡಳಿ ಸದಸ್ಯರು

# ಮುನ್ನುಡಿ

1991ರಲ್ಲಿ ಸಿರ್ಸಿಯಲ್ಲಿ ಜರುಗಿದ ಚತುರ್ಥ ಅಖಿಲ ಹವ್ಯಕ ಸಮ್ಮೇಳನದಲ್ಲಿ ನಿರ್ಧರಿಸಿದಂತೆ ಈಗಿನ ಕಾಲಕ್ಕೆ ಅನುಗುಣವಾಗಿ ಎಲ್ಲರೂ ಆಚರಿಸಲು ಅನುಕೂಲವಾಗುವಂತೆ ಈ 'ಸಂಕ್ಷಿಪ್ತ ಧಾರ್ಮಿಕ ವಿಧಿ' ಎಂಬ ಕೈಪಿಡಿಯನ್ನು ಸಿದ್ಧಪಡಿಸಲಾಗಿದೆ. ಈ ಕೈಪಿಡಿಯನ್ನು ಸಿದ್ಧಪಡಿಸಲು ಒಂದು ವಿದ್ವಾಂಸರ ಸಮಿತಿಯನ್ನು ರಚಿಸಲಾಗಿತ್ತು. ಆ ಸಮಿತಿಯು ಶ್ರಮವಹಿಸಿ ಈ ಕೈಪಿಡಿಯನ್ನು ಸಿದ್ಧಪಡಿಸಿದೆ. ಸಮಿತಿಯ ಎಲ್ಲ ಸದಸ್ಯರುಗಳಿಗೆ ನನ್ನ ಅಭಿನಂದನೆಗಳು. ಈ ಕೈಪಿಡಿ ನಮ್ಮ ಹವ್ಯಕ ಬಾಂಧವರಿಗೆ ಧಾರ್ಮಿಕ ದಾರಿದೀಪವಾಗುತ್ತದೆ ಎಂದು ನಾನು ನಂಬಿದ್ದೇನೆ.

ಎಸ್.ಪಿ. ಭಟ್
ಅಧ್ಯಕ್ಷರು
ಅಖಿಲ ಹವ್ಯಕ ಮಹಾಸಭಾ
ಬೆಂಗಳೂರು

ಬೆಂಗಳೂರು
10–5–1993

# ಸಂಕ್ಷಿಪ್ತ ಧಾರ್ಮಿಕ ವಿಧಿಃ

## ವಿಷಯಾನುಕ್ರಮಣಿಕೆ

# ಮರುನುಡಿ

ಶ್ರೀ ಅಖಿಲ ಹವ್ಯಕ ಮಹಾಸಭಾದಿಂದ ನಿಯೋಜಿತವಾದ ಶ್ರೀ ಮಹಾ ಮಹೋಪಾಧ್ಯಾಯ ವಿದ್ವಾನ್ ರಂಗನಾಥಶರ್ಮ ಅವರು ಅಧ್ಯಕ್ಷರಾಗಿದ್ದ ಧಾರ್ಮಿಕ ಸಮಿತಿಯು ಈ ಬೌಧಾಯನೀಯ. 'ಸಂಕ್ಷಿಪ್ತ ಧಾರ್ಮಿಕ ವಿಧಿ' ಗ್ರಂಥವನ್ನು ಸಿದ್ಧ ಪಡಿಸಿತು. 1994ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟವಾಯಿತು. ಪ್ರಥಮ ಮುದ್ರಿತ ಪುಸ್ತಕಗಳು ಮುಗಿದು ಹೋಗಿ, ಈಗ ತುಂಬಾ ಜನ ಬೇಡಿಕೆಯಿರುವುದರಿಂದ ಎರಡನೇ ಮುದ್ರಣವು ಪ್ರಕಟವಾಗುತ್ತಿದೆ. ಪ್ರಥಮ ಮುದ್ರಣದಲ್ಲಿಯ ಮುದ್ರಾದೋಷದ ಅಕ್ಷರಗಳ ತಪ್ಪುಗಳನ್ನು ಮಾತ್ರ ತಿದ್ದಿ ಪ್ರಕಟಿಸಲಾಗುತ್ತಿದೆ. ವಿಷಯಗಳ ತಿದ್ದುಪಡಿಗಳನ್ನೇನೂ ಮಾಡಿಲ್ಲ. ಇದನ್ನು ಪಡೆದು ಪ್ರಯೋಗ ಮಾಡಿದ ಓದಿದ ಮಹನೀಯರು ಅಗತ್ಯ ಸೂಚನೆಗಳನ್ನು ನೀಡಿದರೆ ಮುಂದಿನ ಮುದ್ರಣದಲ್ಲಿ ಸ್ವೀಕರಿಸಲಾಗುವುದು. ಈ ಎರಡನೇ ಮುದ್ರಣ ಕಾರ್ಯದಲ್ಲಿ ತುಂಬಾ ಶ್ರಮವಹಿಸಿದ ಶ್ರೀ ಚಿದಂಬರ ಭಟ್ಟರು ಅಭಿನಂದನೀಯರು. ಜನರ ಬೇಡಿಕೆಗೆ ಸ್ಪಂದಿಸಿ ಎರಡನೇ ಬಾರಿ ಪ್ರಕಟಿಸುತ್ತಿರುವ ಶ್ರೀ ಅಖಿಲ ಹವ್ಯಕ ಮಹಾಸಭಾ ಕೂಡ ಅಭಿನಂದನಾರ್ಹವಾಗಿದೆ. ಇತ್ತೀಚಿನ ದಿನಗಳಲ್ಲಿ ಅನೇಕ ಕಾರಣಗಳಿಂದ ಕಿಂಚಿತ್ತೂ ತಪ್ಪಿಲ್ಲದೇ ಪುಸ್ತಕವನ್ನು ಮುದ್ರಿಸುವುದು ಕರಕಷ್ಟವಾಗಿದೆ. ಸಹೃದಯರು ಮನ್ನಿಸಬೇಕು. 'ಧರ್ಮೋರಕ್ಷತಿ ರಕ್ಷಿತಃ' ಎಂಬ ಆರ್ಯೋಕ್ತಿಯಂತೆ ನಮ್ಮ ಜನರು ಧರ್ಮಮಾರ್ಗದಲ್ಲಿ ನಡೆದು ಶ್ರೇಯೋಭ್ಯುದಯಗಳನ್ನು ಪಡೆಯಲಿ .

ವಿದ್ವಾನ್ ರಾಮಚಂದ್ರಶರ್ಮ ತ್ಯಾಗಲಿ

# ಅಧ್ಯಕ್ಷರ ನುಡಿ

ಹವ್ಯಕರು ಮೂಲತಃ ವೈದಿಕರು. ನಮ್ಮ ಇತಿಹಾಸವೂ ಅದನ್ನೇ ಸಾರುತ್ತದೆ. ಕಾಲಕ್ರಮೇಣ ಭಟ್ಟ ಎಂಬ ಉಪಾಧಿವಂತರು ಮಾತ್ರ ವೇದಾಧ್ಯಯನ ಮಾಡಿ ಅದನ್ನೇ ಉಪಜೀವಿಕೆಯಾಗಿಸಿಕೊಳ್ಳುವುದು ರೂಢಿಗೆ ಬಂತು. ಪುನಃ ಕಾಲಾಂತರದಲ್ಲಿ ಅಧಿಕ ಧನಸಂಪಾದನೆಯ ಮೂಲಗಳಾದ ವಿವಿಧ ರೀತಿಯ ಉದ್ಯಮ ಉದ್ಯೋಗಗಳನ್ನು ಕಂಡುಕೊಂಡ ನಮ್ಮವರು ಪಟ್ಟಣ ನಗರ ಮಹಾನಗರಗಳನ್ನು ಸೇರಲು ಆರಂಭಿಸಿದಾಗ ನಮ್ಮವರ ಜೀವನದ ಅವಿಭಾಜ್ಯ ಅಂಗವಾದ ಕೃಷಿ ಮತ್ತು ಸಂಸ್ಕಾರಯುತ ಬದುಕನ್ನು ಕಟ್ಟಿಕೊಡುವ ಅನುಷ್ಠಾನ ಇವೆರಡೂ ಹಿನ್ನಡೆಯಾದವು. 'ವೇದೋ ಅಖಿಲ ಧರ್ಮಮೂಲಮ್ ।' ಎಂಬಂತೆ ಎಲ್ಲ ಧರ್ಮಾಚರಣೆಗಳು ವೈದಿಕವಾಗಿವೆ. ನಾವು ಆಚರಿಸುವ ನಿತ್ಯಾನುಷ್ಠಾನಾದಿಗಳು ಮೊದಲಿನಂತೆ ಬಹಳ ದೀರ್ಘವಾಗಿದ್ದರೆ ಅವು ಸಂಪೂರ್ಣ ಬಿಟ್ಟುಹೋಗುವ ಸಾಧ್ಯತೆ ಇರುವುದರಿಂದ 'ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ ||' ಎಂಬ ನೀತಿ ಮಾತಿನಂತೆ ಶಾಸ್ತ್ರೀಯವಾಗಿಯೇ ಎಲ್ಲ ಧಾರ್ಮಿಕವಿಧಿಗಳನ್ನು ಸಂಕ್ಷೇಪಗೊಳಿಸಿ ಸಮಾಜಕ್ಕೆ ನೀಡುವ ಕೈಂಕರ್ಯವನ್ನು ಸುಮಾರು ಹನ್ನೊಂದು ವರ್ಷಗಳ ಹಿಂದೆಯೇ ಮಹಾಸಭೆಯು ಮಾಡಿದೆ. ಈ ಕಿರುಗ್ರಂಥಕ್ಕೆ ಮಾರ್ಗದರ್ಶನವನ್ನು ಮಾಡಿ ಸೊಗಸಾದ ಪ್ರಸ್ತಾವನೆಯನ್ನು ಮಹಾಮಹೋಪಾಧ್ಯಾಯ ವಿದ್ವಾನ್ ರಂಗನಾಥ ಶರ್ಮರು ಬರೆದಿದ್ದರು. ನಮ್ಮ ಸಮಾಜಿಕರು ಈ ಪುಸ್ತಕವನ್ನು ಪಡೆದು, ತಮ್ಮ ವೈದಿಕಾಸಕ್ತಿಯನ್ನು ಉಳಿಸಿಕೊಂಡಿದ್ದಾರೆ. ಆದರೆ ಗ್ರಂಥಗಳ ಪ್ರತಿಗಳು ಮುಗಿದು ವರ್ಷಗಳೇ ಸಂದಿವೆಯಾದರೂ ಪುನರ್ಮುದ್ರಿಸಲು ಸಾಧ್ಯವಾಗದಿರುವುದಕ್ಕೆ ವಿಷಾದವಿದೆ. ತಿಥಿವಾರ ನಕ್ಷತ್ರಾದಿ ಮೂಲ ಮಾಹಿತಿಗಳು, ಮಹಿಳೆಯರು ನಡೆಸಲೇಬೇಕಾದ ವಿಧಿಗಳು, ವಿಧ್ಯುಕ್ತ ಸಂಧ್ಯೋಪಾಸನಕ್ರಮ, ನಾಮಪೂಜಾವಿದಿಗಳು, ಅಷ್ಟೋತ್ತರಶತಾದಿ ನಾಮಾವಲಿಗಳು, ವಿವಿಧದೇವತಾ ಸ್ತುತಿಗಳು ಇವೆಲ್ಲವುಗಳನ್ನು ಒಳಗೊಂಡಿರುತ್ತದೆ. ಸಮಗ್ರ ಧಾರ್ಮಿಕವಿಧಿ, ಆದರೆ ಸಂಕ್ಷಿಪ್ತ, ಈ ಪವಿತ್ರ ಗ್ರಂಥದ ಪುನರ್ಲೋಕಾರ್ಪಣೆಗೆ ಕಾಲ ಸನ್ನಿಹಿತವಾಗಿದೆ. ವಿದ್ವಾನ್ ರಾಮಚಂದ್ರ ಶರ್ಮ ತ್ಯಾಗಲಿಯವರ ಮರುನುಡಿಯೊಂದಿಗೆ, ಸರ್ವವಿಧ ಪರಿಷ್ಕಾರಗಳೊಂದಿಗೆ ಪುನಃ ಪ್ರಕಾಶಿಸಲು ನಮಗೆ ಹೆಮ್ಮೆ ಎನಿಸುತ್ತಿದೆ. ಉಳಿದೆಲ್ಲ ವಿಧಗಳಿಂದ ಸಮೃದ್ಧವಾಗಿರುವ ನಮ್ಮ ಸಮಾಜವು ಅನುಷ್ಠಾನ ಅರ್ಚನೆ, ಹೋಮ ಹವನಾದಿಗಳ ಆಚರಣೆಗಳೊಂದಿಗೆ ಧಾರ್ಮಿಕತೆಯನ್ನೂ ಉಳಿಸಿಕೊಂಡು ಸಮುನ್ನತಿಯನ್ನು ಪಡೆಯಲಿ ಎಂಬ ಸದಾಶಯ ನಮ್ಮದು.

ಇದನ್ನು ಪ್ರಕಾಶನಗೊಳಿಸುವಲ್ಲಿ.... ಪರಿಷ್ಕಾರ ಮತ್ತು ಮಾರ್ಗದರ್ಶನವನ್ನು ಮಾಡಿದ ವಿದ್ವಾನ್ ರಂಗನಾಥ ಶರ್ಮಾ ಹಾಗೂ ವಿದ್ವಾನ್ ರಾಮಚಂದ್ರ ಶರ್ಮಾ ತ್ಯಾಗಲಿ ಇವರಿಗೆ ಪ್ರಣಾಮಪೂರ್ವಕ ಧನ್ಯವಾದಗಳು. ನಿರಂತರ ಪರಿಶ್ರಮವಹಿಸಿದ ಮಹಾಸಭೆಯ ಧಾರ್ಮಿಕ ಸಮಿತಿಯ ಸಂಚಾಲಕರಾದ ಶ್ರೀ ಚಿದಂಬರ ಭಟ್ಟ ಮತ್ತು ವಿದ್ವಾನ್ ಗಂಗಾಧರ ಬೋಡೆ ಅವರಿಗೆ ಅಭಿನಂದನಪೂರ್ವಕ ಕೃತಜ್ಞತೆಗಳು. ಪ್ರಾಯೋಜಕ ದಾನಿಗಳಾಗಿ ಸಹಕರಿಸಿದ ಸಮಾಜಬಂಧುಗಳಿಗೆಲ್ಲ ಆಭಾರಿಯಾಗಿದ್ದೇನೆ. ಶುದ್ಧವಾಗಿ ಅಕ್ಷರವಿನ್ಯಾಸ ಮಾಡಿದ ಶ್ರೀ ಮಂಜುನಾಥ ಉಪಾಧ್ಯರಿಗೂ, ಸ್ಫುಟವಾಗಿ ಮುದ್ರಿಸಿಕೊಟ್ಟ ಶ್ರೀ ನಾಗರಾಜ ಸಿ.ವಿ. ಅವರಿಗೂ, ಅಂದವಾಗಿ ಮುಖಪುಟವನ್ನು ವಿನ್ಯಾಸಗೊಳಿಸಿದ ಶ್ರೀಕಾಂತ ಹೆಗಡೆಯವರಿಗೂ ಅನಂತ ಕೃತಜ್ಞತೆಗಳು. ಇದರ ಸಂಪೂರ್ಣ ಪ್ರಯೋಜನವನ್ನು ಪಡೆದು ಸಮಾಜವು ಸಾಂಸ್ಕೃತಿಕವಾಗಿ ಶ್ರೀಮಂತವಾಗಲಿ, ಧಾರ್ಮಿಕವಾಗಿ ದೃಢವಾಗಲಿ ಎಂಬ ಶುಭಾಶಯಗಳೊಂದಿಗೆ...

ಖರಸಂ। ಚೈತ್ರಶುದ್ಧಸಪ್ತಮೀ ಆದಿತ್ಯವಾರ, — ಶ್ರೀಧರ ಭಟ್ಟ, ಕಲಸೆ

ದಿನಾಂಕ : 10.04.2011 ಸದಾ ತಮ್ಮವ — ಅಧ್ಯಕ್ಷರು ಶ್ರೀ.ಅ.ಹ.ಮಹಾಸಭೆ

# ಪ್ರಸ್ತಾವನೆ

ನಮ್ಮ ಈ ಭಾರತ ದೇಶದಲ್ಲಿ ಅನಾದಿ ಕಾಲದಿಂದಲೂ ಋಷಿಗಳಿಗೆ ಅಪಾರವಾದ ಗೌರವ ಸಲ್ಲುತ್ತ ಬಂದಿದೆ. ರಾಜಮಹಾರಾಜರುಗಳಿಗಿಂತ, ವಿದ್ವಾಂಸರಿಗಿಂತ, ಅವರ ಸ್ಥಾನ ಅತ್ಯುನ್ನತವಾದುದು. ಅಂತಹ ಗೌರವ ಸ್ಥಾನವನ್ನವರು ಪಡೆದದ್ದು ಐಶ್ವರ್ಯದಿಂದಲ್ಲ, ಅಧಿಕಾರ ಬಲದಿಂದಲ್ಲ ಅಥವಾ ಬರಿಯ ವಿದ್ಯೆಯಿಂದಲ್ಲ. ಅಧಿಕಾರವನ್ನಾಗಲಿ, ಐಶ್ವರ್ಯವನ್ನಾಗಲಿ ಋಷಿಗಳು ಬಯಸಿದವರೇ ಅಲ್ಲ. ಅವುಗಳನ್ನು ತುಚ್ಛವಾಗಿ ಕಂಡು ದೂರೀಕರಿಸಿದ ವಿರಕ್ತಪುರುಷರವರು. ಅವರ ವಿದ್ಯೆ ಹಣವನ್ನು ಗಳಿಸುವುದಕ್ಕಾಗಿ ಕಲಿತ ಪುಸ್ತಕ ವಿದ್ಯೆಯಲ್ಲ. ಮತ್ತೇನೆಂದರೆ, ಲೋಕಹಿತಕ್ಕಾಗಿ ವಿನಿಯೋಗಿಸಬೇಕಾದ ತಲಸ್ಪರ್ಶಿಯಾದ ವಿದ್ಯೆ. ತಮ್ಮ ವಿದ್ಯೆಯನ್ನೂ ತಪಃಪ್ರಭಾವವನ್ನೂ ಲೋಕಕಲ್ಯಾಣಕ್ಕಾಗಿ ಧಾರೆಯೆರೆದಿದ್ದರಿಂದಲೇ ಅವರಿಗೆ ಲೋಕೋತ್ತರವಾದ ಗೌರವವನ್ನು ಜನರು ನೀಡಿದರು.

'ಋಷಿ'ಯೆಂಬ ಶಬ್ದಕ್ಕೆ 'ಜ್ಞಾನಿ'ಯೆಂದರ್ಥ. 'ಋಷತಿ ಜಾನಾತೀತಿ ಋಷಿಃ' ಅಥವಾ 'ಋಷತಿ ಗಚ್ಛತಿ ಜ್ಞಾನೇನ ಸಂಸಾರಪಾರಂ–ಇತಿ ಋಷಿಃ' – ಎಂದು ಈ ಶಬ್ದದ ವ್ಯುತ್ಪತ್ತಿ. 'ಋಷಯಃ ಸತ್ಯವಚಸಃ' ಎನ್ನುತ್ತದೆ ಅಮರಕೋಶ. ಸತ್ಯವಾದ ಮಾತನ್ನಾಡತಕ್ಕವರು ಋಷಿಗಳು. ಯಾಸ್ಕರು ನಿರುಕ್ತದಲ್ಲಿ 'ಋಷಿರ್ದರ್ಶನಾತ್' ಎಂದು ಹೇಳಿದ್ದಾರೆ. 'ಪಶ್ಯತಿಹ್ಯಸೌ ಸೂಕ್ಷ್ಮಾನಾರ್ಥಾನ್' ಎಂದು ದುರ್ಗಾಚಾರ್ಯರ ಭಾಷ್ಯವಿದೆ. ಇಂದ್ರಿಯ ಗೋಚರವಾಗದ ಅತಿ ಸೂಕ್ಷ್ಮ ವಸ್ತುಗಳನ್ನು ತಿಳಿಯತಕ್ಕವರು ಋಷಿಗಳೆಂದು ಅದರ ಅಭಿಪ್ರಾಯ ಮತ್ತು ಯಾಸ್ಕರು ''ತದ್ಯದೇನಾನ್ ತಪಸ್ಯಮಾನನ್ ಬ್ರಹ್ಮ ಸ್ವಯಂಭು ಅಭ್ಯಾನರ್ಷತ್ ತೇ ಋಷಯೋಽಭವನ್, ತದೃಷೀಣಾಂ ಋಷಿತ್ವಂ'' ಎಂದು ಹೇಳಿದ್ದಾರೆ. ತಪಸ್ಸನ್ನಾಚರಿಸುತ್ತಿದ್ದ ಯಾರ ಅಂತರಂಗದಲ್ಲಿ, ಸ್ವಯಂಭು– ಅಪೌರುಷೇಯವಾದ, ಬ್ರಹ್ಮ– ವೇದವು ಅಭ್ಯಾನರ್ಷತ್ ಆವಿರ್ಭವಿಸಿತೋ ಅವರು ಋಷಿಗಳು. ತಪಸ್ಸನ್ನಾಚರಿಸುವಾಗ ಋಷಿಗಳ ಚಿತ್ತದಲ್ಲಿ ವೇದಗಳು ಸ್ಫುರಿಸಿದವು, ಹಾಗೆ ಸ್ಫುರಿಸಿದ ವೇದಗಳನ್ನು ಅವರು ವಾಗ್ರೂಪದಲ್ಲಿ ಪ್ರಕಟಿಸಿದರು, ಒಂದು ಗ್ರಂಥವನ್ನು ರಚಿಸುವಂತೆ ಅವರು ಯತ್ನಪೂರ್ವಕವಾಗಿ ವೇದಗಳನ್ನು

ರಚಿಸಲಿಲ್ಲ– ಎಂದು ಈ ಮಾತಿನಿಂದ ಸಿದ್ಧವಾಗುತ್ತದೆ. ಆದ್ದರಿಂದಲೇ ವೇದಗಳು ಅಪೌರುಷೇಯಗಳೆಂದೂ, ಮಾನವ ರಚಿತಗಳಲ್ಲವೆಂದೂ ಗೊತ್ತಾಗುತ್ತದೆ. ಇದಕ್ಕಾಗಿಯೇ ಈಗಲೂ ಒಂದೊಂದು ಮಂತ್ರದ ಋಷಿ, ದೇವತೆ ವಿನಿಯೋಗಗಳನ್ನು ಹೇಳುವ ಪದ್ಧತಿ ಉಳಿದುಬಂದಿದೆ. ಮುಖ್ಯ ವೃತ್ತಿಯಿಂದಲೇ ಋಷಿಯೆಂದರೆ ಮಂತ್ರ ದ್ರಷ್ಟವೆಂದರ್ಥ. ಇವರು ಬ್ರಹ್ಮರ್ಷಿಗಳು.

ಜಗತ್ತಿನಲ್ಲಿ ಮನುಷ್ಯನ ಸಹಜವಾದ ಪ್ರವೃತ್ತಿ ಅರ್ಥ, ಕಾಮಗಳೆಡೆಗೆ, ಇವೆರಡನ್ನು ಗಳಿಸಲು ಯಾರಿಗೂ ಯಾವ ಪ್ರೇರಣೆಯೂ ಬೇಕಾಗಿಲ್ಲ. ಇವೆರಡೇ ಮಾನವನ ಗುರಿಯಾದಾಗ ಜಗತ್ತು ವಿನಾಶದ ಕಡೆಗೆ ಧಾವಿಸುತ್ತದೆ. ಮಾನವನು ಪಶುವಿಗಿಂತ ಕೀಳಾಗಿ, ಪಶುವಿಗಿಂತ ಕ್ರೂರಿಯಾಗಿ ಸಮಾಜವನ್ನು ನರಕಸದೃಶವಾಗಿ ಮಾಡಿಬಿಡುತ್ತಾನೆ. ಹುಚ್ಚು ಕುದುರೆಯಾಗಿ ಓಡುವ ಮಾನವನನ್ನು ಧರ್ಮದ ಲಗಾಮಿನಿಂದ ಹಿಡಿದು ನಿಲ್ಲಿಸಿದವರು ಋಷಿಗಳು. ಜಗತ್ತನ್ನು ಧರಿಸಿರುವುದು ಧರ್ಮವೇ. ಧರ್ಮದ ತಳಹದಿಯ ಮೇಲೆ ಗಳಿಸುವ ಮತ್ತು ಅನುಭವಿಸುವ ಅರ್ಥ ಕಾಮಗಳು ಲೋಕಕ್ಕೆ ಬಾಧಕಗಳಲ್ಲವೆಂದೂ ಸಮಾಜದ ಕ್ಷೇಮಕಾರಿಯಾದ ಅಭಿವೃದ್ಧಿಗೆ ಹಿತಕಾರಿಗಳಾಗುತ್ತವೆಯೆಂದೂ ಗೊತ್ತುಮಾಡಿ, ಧರ್ಮವನ್ನೂ ಮನುಷ್ಯನ ಧ್ಯೇಯವಾಗಿ ಗೊತ್ತುಮಾಡಿದವರು ಋಷಿಗಳು. ಅವರು ಇನ್ನೂ ಮುಂದೆ ಹೋಗಿ ಮೋಕ್ಷವನ್ನೇ ಮನುಷ್ಯನ ಪರಮ ಧ್ಯೇಯವೆಂದು ನಿರ್ಣಯಿಸಿದರು. ಹೀಗೆ ಧರ್ಮ, ಅರ್ಥ, ಕಾಮ, ಮೋಕ್ಷ, ಎಂಬವು ನಾಲ್ಕು ಪುರುಷಾರ್ಥಗಳೆಂದು ನಿಶ್ಚಯಿಸಿದ ಕೀರ್ತಿ ನಮ್ಮ ಭಾರತೀಯರಿಗೆ ಸಲ್ಲುತ್ತದೆ. ಮನುಷ್ಯ ಜಾತಿಯ ಹೃದಯಾಂತರಾಳದ ಬಯಕೆ ಇವಿಷ್ಟೇ ಎಂದು ಕಂಡುಹಿಡಿದ ಮಹಾಮಹಿಮರು ಈ ಋಷಿಗಳು. ಪ್ರಪಂಚದ ಯಾವ ದಾರ್ಶನಿಕರೂ ಈ ಮರ್ಮವನ್ನು ಕಾಣಲಿಲ್ಲ.

ಮಹಾಭಾರತದಲ್ಲಿ –

**ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾ ।**
**ಯೋ ಹ್ಯೇಕಭಕ್ತಃ ಸ ನರೋ ಜಘನ್ಯಃ ॥**

ಎಂದು ಹೇಳಿದೆ. ''ಧರ್ಮ, ಅರ್ಥ, ಕಾಮಗಳನ್ನು ಸಮಾನವಾಗಿ ಸೇವಿಸಬೇಕು. ಅವುಗಳಲ್ಲಿ ಯಾವುದಾದರೊಂದನ್ನು ಮಾತ್ರ ಸೇವಿಸತಕ್ಕವನು ಅಧಮ.'' ಮೋಕ್ಷದ ಮಾತಿರಲಿ, ಲೋಕದಲ್ಲಿ ತಾನು ಸುಖವಾಗಿ ಬಾಳಬೇಕು ತನ್ನ

ಸುತ್ತಮುತ್ತಲಿನ ಸಮಾಜವೂ ಸುಖವಾಗಿರಬೇಕು ಎಂಬ ಧ್ಯೇಯವು ಸರ್ವಸಾಮಾನ್ಯವಾದದ್ದು. ಈ ಅರ್ಥಕಾಮಗಳ ಮೂಲ ಧರ್ಮ ಧರ್ಮದಿಂದ ಅರ್ಥ ಕಾಮಗಳನ್ನು ಅರ್ಜಿಸಿದಾಗ ಮಾತ್ರ ಎಲ್ಲರಿಗೂ ಸೌಖ್ಯ ಉಂಟು. ಈ ಮೂರನ್ನೂ ತ್ರಿವರ್ಗ ಎನ್ನುತ್ತಾರೆ.

ಈ ದೃಷ್ಟಿಯನ್ನವಲಂಬಿಸಿ ಪರಮ ಜ್ಞಾನಿಗಳಾದ ಋಷಿಗಳು ಲೋಕಹಿತಕ್ಕಾಗಿ ವಿವಿಧ ಶಾಸ್ತ್ರಗಳನ್ನು ರಚಿಸಿದ್ದಾರೆ. ಅರ್ಥಶಾಸ್ತ್ರ, ಆಯುರ್ವೇದ, ಗಣಿತ, ಸಂಗೀತ, ನೃತ್ಯ, ಕಾವ್ಯ ಮುಂತಾದವು ಇಹಕ್ಕಾಗಿಯೇ ಬರೆದವೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಇನ್ನು ವೇದಾಂತವೂ ವಿವಿಧ ದರ್ಶನಗಳೂ ಪರಕ್ಕಾಗಿ. ಹೀಗೆ ಸರ್ವತೋಮುಖವಾದ ವಿಸ್ತೃತ ವಾಙ್ಮಯವನ್ನು ಬೆಳೆಸುವುದಕ್ಕೆ ಮೂಲಕಾರಣರಾದವರು ಋಷಿಗಳು. ಇವುಗಳಲ್ಲಿ ಧರ್ಮಶಾಸ್ತ್ರವು ಇಹಪರಗಳೆರಡಕ್ಕೂ ಅತ್ಯಾವಶ್ಯಕವಾದ ಸಾಧನವೆಂಬುದು ನಿರ್ವಿವಾದ. ಧರ್ಮದಲ್ಲಿ ನಮ್ಮ ಪ್ರಾಚೀನರು ತೀವ್ರವಾದ ಶ್ರದ್ಧೆಯನ್ನಿಟ್ಟಿದ್ದರು.

ಬಾಲಕರಾದ ಶ್ರೀ ರಾಮ ಲಕ್ಷ್ಮಣರನ್ನು ವಿಶ್ವಾಮಿತ್ರರು ತಮ್ಮ ಆಶ್ರಮಕ್ಕೆ ಕರೆದೊಯ್ಯುವಾಗ ಅರಣ್ಯದಲ್ಲಿ ಒಂದು ರಾತ್ರಿ ತಂಗಿದ್ದರು. ಬೆಳಗಾಗುತ್ತ ಬಂದಿತು. ಸೊಪ್ಪಿನ ಹಾಸಿಗೆಯಲ್ಲಿ ಮಲಗಿದ್ದ ರಾಮ ಲಕ್ಷ್ಮಣರನ್ನು ನೋಡಿ ವಿಶ್ವಾಮಿತ್ರರು ಹೇಳುತ್ತಾರೆ:

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ॥

"ರಾಮ, ನಿನ್ನನ್ನು ಹಡೆದ ಕೌಸಲ್ಯೆ ಭಾಗ್ಯಶಾಲಿನಿ, ಬೆಳಗಾಗುತ್ತ ಬಂದಿತು. ಪುರುಷೋತ್ತಮ, ಏಳು; ಇನ್ನು ಸಂಧ್ಯಾವಂದನಾದಿ ನಿತ್ಯ ಕರ್ಮವನ್ನು ಮಾಡಬೇಕು."

ತಸ್ಯರ್ಷೇಃ ಪರಮೋದಾರಂ ವಚಃ ಶ್ರುತ್ವಾ ನೃಪಾತ್ಮಜೌ ।
ಸ್ನಾತ್ವಾ ಕೃತೋದಕೌ ವೀರೌ ಜೇಪತುಃ ಪರಮಂ ಜಪಮ್ ॥
ಕೃತಾಹ್ನಿಕೌ ಮಹಾವೀರೌ ವಿಶ್ವಾಮಿತ್ರಂ ತಪೋಧನಮ್ ।
ಅಭಿವಾದ್ಯಾಭಿಸಂಹೃಷ್ಟೌ ಗಮನಾಯೋಪತಸ್ಥತುಃ ॥

"ಮಹರ್ಷಿಗಳ ಪ್ರಸನ್ನ ಗಂಭೀರವಾದ ಆ ಮಾತನ್ನು ಕೇಳಿ ರಾಜಕುಮಾರರು ಎದ್ದರು. ಸ್ನಾನ ಮಾಡಿ ಸೂರ್ಯನಿಗೆ ಅರ್ಘ್ಯವನ್ನಿತ್ತು ಗಾಯತ್ರಿಯನ್ನು ಜಪಿಸಿದರು.

ತಮ್ಮ ಆಹ್ನಿಕಗಳನ್ನು ಮುಗಿಸಿ ಮಹಾವೀರರಾದ ರಾಮಲಕ್ಷ್ಮಣರು ಆ ತಪೋಧನರಿಗೆ ಅಭಿವಾದನೆ ಮಾಡಿ ಮುಂದೆ ಹೊರಡಲು ಸಿದ್ಧರಾದರು. ಇದು ಶ್ರೀ ರಾಮಾಯಣವು ತೋರಿಸಿಕೊಟ್ಟ ದಾರಿ.

ಮಹಾಭಾರತ ಯುದ್ಧ ಮುಗಿಯಿತು. ಶರತಲ್ಪದಲ್ಲಿ ಮಲಗಿದ್ದ ಭೀಷ್ಮಾಚಾರ್ಯರು ನರಕಯಾತನೆಯನ್ನನುಭವಿಸುತ್ತ ಪ್ರಾಣ ಹಾರಿಹೋಗುವ ಸ್ಥಿತಿಯಲ್ಲಿದ್ದಾಗ ಯುಧಿಷ್ಠರನಿಗೆ ಹೇಳುತ್ತಾರೆ.

ಸ್ಪೃಹಯಾಮಿ ದ್ವಿಜಾತಿಭ್ಯೋ ಯೇಷಾಂ ಬ್ರಹ್ಮಪರಂ ಧನಮ್ ।
ಯೇಷಾಂ ಸ್ವಪ್ರತ್ಯಯಃ ಸ್ವರ್ಗಸ್ತಪಃ ಸ್ವಾಧ್ಯಾಯ ಸಾಧನಮ್ ॥
ಯೇಷಾಂ ಬಾಲಾಶ್ಚ ವೃದ್ಧಾಶ್ಚ ಪಿತೃಪೈತಾಮಹೀಂ ಧುರಮ್ ॥
ಉದ್ವಹಂತಿ ನ ಸೀದಂತಿ ತೇಭ್ಯೋ ವೈ ಸ್ಪೃಹಯಾಮ್ಯಹಮ್ ॥

– ಅನುಶಾಸನ ಪರ್ವ, ಅಧ್ಯಾಯ – 9

''ಯುಧಿಷ್ಠಿರ, ಯಾರಿಗೆ ವೇದವೇ ಪರಮ ಧನವಾಗಿದೆಯೋ, ಯಾರಿಗೆ ತಪಸ್ಸು ವೇದಾಧ್ಯಯನಗಳಿಂದಾಗುವ ಆತ್ಮಜ್ಞಾನವೇ ಸ್ವರ್ಗವೆನಿಸುತ್ತದೆಯೋ ಅಂಥ ಬ್ರಾಹ್ಮಣರನ್ನು ಕಂಡರೆ ನನಗೆ ಬಹಳ ಆಸೆ. ಯಾರಲ್ಲಿ ಹುಡುಗರೂ ಮುದುಕರೂ ಸಹ ಪಿತೃಪಿತಾಮಹ ಪರಂಪರೆಯಿಂದ ಬಂದ ವೇದಾಧ್ಯಯನ – ಕರ್ಮಾನುಷ್ಠಾನಗಳ ಹೊರೆಯನ್ನು ಉತ್ಸಾಹದಿಂದ ಹೊರುತ್ತಲೇ ಇದ್ದಾರೋ, ಎಂದಿಗೂ ಹಿಂಜರಿಯುವುದಿಲ್ಲವೋ, ಅಂಥ ಬ್ರಾಹ್ಮಣರ ಮೇಲೆ ನನಗೆ ತುಂಬ ಅಭಿಮಾನ''– ಇದು ಮಹಾಭಾರತವು ಸೂಚಿಸಿದ ಮಾರ್ಗ.

ಇಂದು ಭಾರತೀಯರು ಪ್ರಪಂಚದಲ್ಲಿ ಹೆಮ್ಮೆಯಿಂದ ತಲೆಯತ್ತಿ ನಿಲ್ಲಲು ಋಷಿಗಳು ರಚಿಸಿದ ವಿಪುಲ ವಾಙ್ಮಯವೇ ಆಧಾರ. ಋಷಿಗಳು ಸಂಪಾದಿಸಿಕೊಟ್ಟ ಜ್ಞಾನ ಭಂಡಾರವೇ ನಮ್ಮ ಸ್ಫೂರ್ತಿಗೆ ನೆಲೆ. ಈ ಜ್ಞಾನ ಭಂಡಾರವನ್ನು ಬದಿಗಿಟ್ಟರೆ ಭಾರತೀಯರು ಹೇಳಿಕೊಳ್ಳಬಹುದಾದ ಭಾರತೀಯ ಸಂಸ್ಕೃತಿಯೆಂಬುದಾದರೂ ಯಾವುದು?

ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।
ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವ ಮಾನವಾಃ ॥

''ಈ ಭರತಖಂಡದಲ್ಲಿ ಜನಿಸಿದ ವಿಪ್ರನಿಂದ ಜಗತ್ತಿನಲ್ಲಿರುವ ಸಕಲರೂ ತಮ್ಮ ತಮ್ಮ ನಡೆನುಡಿಗಳನ್ನು ಕಲಿತುಕೊಳ್ಳಬೇಕು'' ಎಂದು ಮನುವು ಹೇಳಿದ್ದು ಆತ್ಮ

ಪ್ರಶಂಸೆಯಲ್ಲ. ಜಗತ್ತಿಗೆ ಆಚಾರ್ಯ ಸ್ಥಾನದಲ್ಲಿ ನಿಂತಿದ್ದ ಭರತಖಂಡ ಈಗ ಯಾವ ಸ್ಥಿತಿಯಲ್ಲಿದೆ?

ಪ್ರೊ. Max Muller ಹೀಗೆ ಉದ್ಗರಿಸಿದ್ದಾನೆ.

"If I were asked under what sky the human mind has most fully developed, some of its choicest gifts has most deeply pondered on the greatest problems of life and has found solution to some of them, which will deserve the attention of those who have studied Plato and Kant, I should point to India ."

ಇಂತಹ ಒಂದು ಲೋಕೋತ್ತರವಾದ ಮಹಾಪರಂಪರೆಯಲ್ಲಿ ಬಂದಿರತಕ್ಕ ನಾವು ಆ ಹಿರಿತನದ ಒಂದಂಶವನ್ನಾದರೂ ಉಳಿಸಿಕೊಂಡು ಹೋಗುವುದು ಅವಶ್ಯ ಕರ್ತವ್ಯವಾಗಿದೆ. ವೈದಿಕ ಸಂಸ್ಕೃತಿಯ ಉತ್ತಮ ಪ್ರಯೋಜನವನ್ನು ಪಡೆದವರು ಸಮಸ್ತ ಭಾರತ ಪ್ರಜೆಗಳೇ ಆದರೂ ನೇರವಾದ ಉತ್ತರ ದಾಯಾದಿತ್ವವು ಬ್ರಾಹ್ಮಣ ಕುಲಸಂಜಾತರಿಗೆ ಸೇರಿದ್ದು. ಬ್ರಾಹ್ಮಣವರ್ಗದವರೇ ವೈದಿಕ ಧರ್ಮಾಚರಣೆಯನ್ನು ಉಪೇಕ್ಷಿಸಿದರೆ ಈ ಋಷಿ ಪರಂಪರೆಯ ಜೀವಾಳವು ನಶಿಸಿದಂತೆಯೇ ಸರಿ. ಇಂತಹ ಕೃತಘ್ನತೆ ಬ್ರಾಹ್ಮಣ ವರ್ಗದ ಹೆಗಲನ್ನೇರುವುದಕ್ಕೆ ಎಂದಿಗೂ ಅವಕಾಶವನ್ನೀಯಬಾರದು.

ಬ್ರಿಟಿಷರ ಆಳ್ವಿಕೆಯಿಂದ ಬಿಡುಗಡೆ ಹೊಂದುವುದಕ್ಕೆ ಮೊದಲೇ ಬ್ರಾಹ್ಮಣರಲ್ಲಿ ಧರ್ಮಶ್ರದ್ಧೆ ಶಿಥಿಲಗೊಳ್ಳುತ್ತ ಬಂದಿತ್ತು. ಇದು ಪರಕೀಯ ಪ್ರಭುತ್ವದ ಪರಿಣಾಮವೆಂದೂ ದೇಶವು ಸ್ವತಂತ್ರವಾದಾಗ ಧರ್ಮನಿಷ್ಠೆ ಉತ್ತಮಗೊಳ್ಳುವುದೆಂದೂ ನಮ್ಮ ಹಿರಿಯರು ಹೇಳುತ್ತಿದ್ದುದುಂಟು. ಆದರೆ ಅವರ ನಿರೀಕ್ಷಣೆಯೆಲ್ಲವೂ ಇಂದು ಹುಸಿಯಾಗತೊಡಗಿದೆ. ಈ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದ ಮೇಲೆ ನಮ್ಮಲ್ಲಿ ಹಿಂದಿಲ್ಲದ ನಾಸ್ತಿಕತೆ ತಲೆಯತ್ತಿದೆ. ಧರ್ಮಶ್ರದ್ಧೆ ದಿನದಿನದಲ್ಲಿ ಲುಪ್ತವಾಗುತ್ತ ನಡೆದಿದೆ. ಕೇವಲ ನಾಲ್ಕು ದಶಕಗಳಲ್ಲಿ ಧಾರ್ಮಿಕ ವಿಶ್ವಾಸವು ಸಡಿಲಿದ ಗತಿ ವೇಗವನ್ನು ನೋಡಿದರೆ, ಇನ್ನು ನಾಲ್ಕು ದಶಕಗಳಲ್ಲಿ ಬ್ರಾಹ್ಮಣ್ಯವೇ ನಿರ್ಮೂಲವಾಗಿಬಿಡುವುದೋ ಎಂಬ ಭಯ ಆವರಿಸುತ್ತಿದೆ.

ಇಂದು ಕಾಲ ಪರಿಸ್ಥಿತಿಯು ವೇಗದಿಂದಲೇ ಬದಲಾಯಿಸಿರುವುದು ಹೌದು. ಜೀವನ ಮಾರ್ಗ ತುಂಬ ತೊಡಕಿನದಾಗಿದೆ. ಕೃಷಿ, ವಾಣಿಜ್ಯ, ಕಾರಕಾನೆ, ನೌಕರಿ ಮೊದಲಾದ ವೃತ್ತಿಯನ್ನಾಶ್ರಯಿಸಿ ಜೀವಿಕೆಯನ್ನು ನಡೆಸಬೇಕಾಗಿದೆ. ನಗರ

ಜೀವನವಂತೂ ನಾನಾ ಸಮಸ್ಯೆಗಳನ್ನು ತಂದೊಡ್ಡುತ್ತಿದೆ. ಈ ಕ್ಲಿಷ್ಟ ಪರಿಸ್ಥಿತಿಯಲ್ಲಿ ವೇದಶಾಸ್ತ್ರಗಳ ಅಧ್ಯಯನಕ್ಕಾಗಲೀ, ನಿತ್ಯಕರ್ಮಾನುಷ್ಠಾನಕ್ಕಾಗಲೀ ಅವಕಾಶವೆಲ್ಲಿದೆ? ಅದಕ್ಕೆ ಬೇಕಾದ ಪರಿಸರ ಹೇಗೆ ಒದಗುತ್ತದೆ? ಜನರ ಆಸೆ, ಆಕಾಂಕ್ಷೆ, ಅಭಿರುಚಿಗಳೇ ಭಿನ್ನವಾಗುತ್ತಿರುವಾಗ ಧಾರ್ಮಿಕಾಚರಣೆಗೆ ಯಾವ ಸ್ಥಾನ ಉಂಟು? ಇತ್ಯಾದಿ ಪ್ರಶ್ನೆಗಳು ತಲೆದೋರುತ್ತವೆ. ಈ ಸಂಗತಿ ವಾಸ್ತವವೂ ಹೌದು.

ಆದರೆ ಇಂದು ಎಲ್ಲ ಬ್ರಾಹ್ಮಣರೂ ವೇದಶಾಸ್ತ್ರ ಪಾರಂಗತರಾಗಬೇಕೆಂದಾಗಲಿ ಚಾಚೂತಪ್ಪದೆ ನಿತ್ಯಕರ್ಮಗಳನ್ನು ನಡೆಸಬೇಕೆಂದಾಗಲಿ ಉಪದೇಶಿಸುವುದು ಸರಿಯಾಗದು. ಕೇವಲ ಸಂಧ್ಯಾವಂದನೆಯ ವಿಧಾನವನ್ನು ಕಲಿಯುವುದಕ್ಕಾಗಲಿ ಅದನ್ನು ಆಚರಿಸುವುದಕ್ಕಾಗಿ ಅವಕಾಶವಿಲ್ಲವೆನ್ನುವುದು ಒಪ್ಪತಕ್ಕದ್ದು. ಅಂತಹ ಅವಕಾಶವಿಲ್ಲದವರು ಇದ್ದರೆ ಇದ್ದುಕೊಂಡಿರಲಿ. ಯಾರಿಗೆ ಅವಕಾಶವಿದೆಯೋ ಪರಿಸರವೂ ಅನುಕೂಲವಾಗಿದೆಯೋ ಅವರು ಕೈಬಿಡುತ್ತಿರುವುದೇಕೆ? ಹಳ್ಳಿಗಳಲ್ಲಿರುವ ಕೃಷಿಕರಿಗೂ, ಚಿಕ್ಕ ಪಟ್ಟಣಗಳಲ್ಲಿರುವ ನೌಕರರಿಗೂ, ವ್ಯಾಪಾರಿಗಳಿಗೂ, ನಗರದಲ್ಲಿರುವ ಕೆಲವು ವೃತ್ತಿಯವರಿಗಾದರೂ ಆಚರಣೆ ಸಾಧ್ಯವಿದೆ. ಆಲಸ್ಯ, ಉಪೇಕ್ಷೆಗಳೇ ಧರ್ಮಭ್ರಷ್ಟತೆಯ ತವರು.

ಹಿಂದೆ ಹಳ್ಳಿಗಳಲ್ಲಿ ಗ್ರಾಮಸ್ಥರಾದ ವೈದಿಕರೇ ಉಪನೀತರಾದ ಬಾಲಕರಿಗೆ ವೇದಪಾಠವನ್ನು ಹೇಳುತ್ತಿದ್ದರು. ಅಂಥವರ ಕೊರತೆಯುಂಟಾದಾಗ ಪರಸ್ಥಳಿಂದ ಅವಧಾನಿಗಳನ್ನು ಕರೆಸಿಕೊಂಡು ನಿತ್ಯೋಪಯೋಗಿಯಾದ ಸಂಧ್ಯಾವಂದನೆ, ದೇವ ಪೂಜೆಗಳ ಮಂತ್ರವನ್ನು ಮಕ್ಕಳಿಗೆ ಕಲಿಸುತ್ತಿದ್ದರು. ಅಲ್ಲಲ್ಲಿ ವೇದ ಸಂಸ್ಕೃತ ಪಾಠಶಾಲೆಗಳಿದ್ದವು. ಅವುಗಳಲ್ಲಿಯೂ ಗ್ರಾಮಸ್ಥರ ಆಸಕ್ತಿ ಶಿಥಿಲವಾಯಿತು. ಹೈಸ್ಕೂಲುಗಳು ಹಳ್ಳಿಗೆ ನುಗ್ಗಿದ ಮೇಲೆ ಎಲ್ಲದಕ್ಕೂ ಇತಿಶ್ರೀಯಾಯಿತು. ವೇದಘೋಷಗಳಿಂದ ಮೊಳಗುತ್ತಿದ್ದ ವೈದಿಕರ ಮನೆಗಳಲ್ಲಿಯೂ ಇಂದು ದೇವ ಪೂಜೆಯ ಘಂಟಾನಾದವನ್ನು ಕೇಳುವುದೂ ದುಷ್ಕರವಾಗಿದೆ.

ನಾವು ಹುಟ್ಟುವಾಗ ಮೂರು ಋಣಗಳನ್ನು ಹೊತ್ತುಕೊಂಡೇ ಬಂದಿರುತ್ತೇವೆಂದು ಧರ್ಮ ಶಾಸ್ತ್ರ ಹೇಳುತ್ತದೆ, ಋಷಿಋಣ, ದೇವಋಣ, ಪಿತೃಋಣ ಎಂದು. ಇವು ಮೂರರಿಂದ ಸಾಲಿಗರು ನಾವು. ಋಷಿ ಋಣದ ವಿಷಯವನ್ನು ಆರಂಭದಲ್ಲಿ ಸ್ವಲ್ಪಮಟ್ಟಿಗೆ ಹೇಳಲಾಗಿದೆ. ಆ ಮಹರ್ಷಿಗಳು ರಚಿಸಿಕೊಟ್ಟು ಹೋಗಿರುವ ದಿವ್ಯಸಾಹಿತ್ಯ ನಮ್ಮ ಕಣ್ಣ ಮುಂದಿದೆ. ಅನ್ನ, ನೀರು,

ಬೆಳಕು, ಮುಂತಾದ ಪ್ರಕೃತಿ ಸಂಪತ್ತಿನ ಬಳಕೆಯಿಂದಾಗತಕ್ಕದ್ದು ದೇವಋಣ.

ತಂದೆ–ತಾಯಿಗಳಿಂದಾದ ಉಪಕಾರ, ಅವರು ಸಂಪಾದಿಸಿದ ಆಸ್ತಿಯನ್ನನುಭವಿಸುವುದು, ಅವರ ಉತ್ತಮ ಮಾರ್ಗದರ್ಶನ ಇವುಗಳಿಂದಾಗತಕ್ಕದ್ದು ಪಿತೃಋಣ. ಅರ್ಹ ಗ್ರಂಥಗಳ ಅಧ್ಯಯನ, ಅಧ್ಯಾಪನಗಳಿಂದ ಋಷಿಋಣವನ್ನೂ, ಪಿತೃಕಾರ್ಯಗಳ ಆಚರಣೆಯಿಂದ ಪಿತೃಋಣವನ್ನೂ ಪ್ರತಿಯೊಬ್ಬನೂ ತೀರಿಸಬೇಕಾಗಿದೆ. ಮನುಷ್ಯ ಋಣ, ಭೂತ ಋಣ ಎಂಬ ಇನ್ನೆರಡು ಋಣಗಳನ್ನೂ ಧರ್ಮಶಾಸ್ತ್ರ ಹೇಳುತ್ತದೆ. ಸಮಾಜದಿಂದಾಗುವ ಪ್ರಯೋಜನಗಳನ್ನನುಭವಿಸುವುದು ಮನುಷ್ಯ ಋಣ. ಪಶುಪಕ್ಷಿಗಳಿಂದಾಗುವ ಉಪಕಾರದಿಂದ ಭೂತ ಋಣ. ಈ ಎರಡು ಋಣಗಳನ್ನು ತೀರಿಸುವುದು ಬ್ರಾಹ್ಮಣನ ಪ್ರಥಮ ಕರ್ತವ್ಯವಾಗಿದೆ. ಆ ಮೂರರ ವಿಷಯದಲ್ಲಿಯೇ ನಮ್ಮ ಕರ್ತವ್ಯ ಲೋಪ ಕಾಣುವುದರಿಂದ ಅದೀಗ ಪ್ರಸ್ತುತವಾಗಿದೆ.

ವಸಿಷ್ಠ, ವಿಶ್ವಾಮಿತ್ರ, ಅತ್ರಿ, ಗೌತಮ ಮೊದಲಾದ ಮಹರ್ಷಿಗಳ ಭವ್ಯ ಪರಂಪರೆಯಲ್ಲಿ ಜನಿಸಿದವರು ನಾವು. ವಸಿಷ್ಠಗೋತ್ರ, ವಿಶ್ವಾಮಿತ್ರಗೋತ್ರ, ಇತ್ಯಾದಿಯಾಗಿ ಹೇಳಿಕೊಳ್ಳುತ್ತೇವಷ್ಟೆ. ಗೋತ್ರವೆಂದರೇನು? ಗೋತ್ರವೆಂದರೆ ವಂಶವೆಂದೂ ವಂಶದಲ್ಲಿ ಹುಟ್ಟಿದವನೆಂದೂ ಅರ್ಥ.

ವಿಶ್ವಾಮಿತ್ರೋ ಜಮದಗ್ನಿರ್ಭರದ್ವಾಜೋऽಥ ಗೌತಮಃ ।
ಅತ್ರಿರ್ವಸಿಷ್ಠಃ ಕಶ್ಯಪ ಇತ್ಯೇತೇ ಸಪ್ತ ಋಷಯಃ ।
ಸಪ್ತಾನಾಂ ಋಷೀಣಾಮಗಸ್ತ್ಯಾಷ್ಟಮಾನಾಂ ಯದಪತ್ಯಂ
ತದ್ ಗೋತ್ರಮಿತ್ಯುಚ್ಯತೇ ॥

ಅರ್ಥ– ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ವಸಿಷ್ಠ ಕಶ್ಯಪ ಇವರು ಸಪ್ತರ್ಷಿಗಳು. ಈ ಸಪ್ತರ್ಷಿಗಳ ಮತ್ತು ಎಂಟನೆಯವರಾದ ಅಗಸ್ತ್ಯರ ವಂಶೀಯನು ಗೋತ್ರ ಎನ್ನಿಸಿಕೊಳ್ಳುತ್ತಾನೆ. ಎಂದರೆ ಈ ಎಂಟು ಋಷಿಗಳ ಸಂತಾನದವರು ಮಿಶ್ವಾಮಿತ್ರಗೋತ್ರ, ಜಮದಗ್ನಿಗೋತ್ರ ಮುಂತಾದ ಹೆಸರು ಪಡೆಯುತ್ತಾರೆ.

ಪ್ರಧಾನವಾಗಿ ಈ ಎಂಟು ಋಷಿಗಳೇ ಗೋತ್ರ ಪ್ರವರ್ತಕರು. ಇವರ ವಂಶದಲ್ಲಿ ಹುಟ್ಟಿದ ಇನ್ನೂ ಕೆಲವು ಋಷಿಗಳು ತಪಃ ಸಾಮರ್ಥ್ಯದಿಂದ

ಗೋತ್ರಪ್ರವರ್ತಕರಾದರು. ಆದ್ದರಿಂದ ಕೌಂಡಿನ್ಯ, ಅಶ್ವಲಾಯನ ಮೊದಲಾದವರು ಗೋತ್ರಪ್ರವರ್ತಕರೇ. ಇನ್ನು ಪ್ರವರ ಎಂಬುದೊಂದುಂಟು. ''ಯಜ್ಞದಲ್ಲಿ ವರಿಸಲ್ಪಡತಕ್ಕವರು ಪ್ರವವರು. ಇವರು ಆಯಾ ಗೋತ್ರಕಾರರ ಸಂತತಿಯವರೂ ಮಂತ್ರದ್ರಷ್ಟಾರರೂ ಆಗಿದ್ದಾರೆ. ಯಾರನ್ನು ವರಣ ಮಾಡಿ ಯಜಮಾನನು ಪ್ರಾರ್ಥನೆ ಸಲ್ಲಿಸುವನೋ ಅವರು ಪ್ರವರರ್ಷಿಗಳು '' ಎಂಬ ಅಭಿಪ್ರಾಯ ಅಭಿನವ ಮಾಧವೀಯ ಮುಂತಾದ ಗ್ರಂಥಗಳಿಂದ ವ್ಯಕ್ತವಾಗಿದೆ. ಈ ಪ್ರವರರ್ಷಿಗಳು ಗೋತ್ರ ಪ್ರವರ್ತಕ ವಂಶದವರೇ ಆಗಿದ್ದು ಒಂದು ವಿಶಿಷ್ಟವಾದ ಗೌರವ ಸ್ಥಾನವನ್ನು ಪಡೆದುಕೊಂಡು ಸ್ಮರಣೀಯರಾಗಿದ್ದಾರೆ.

ಪ್ರತಿಯೊಬ್ಬ ಬ್ರಾಹ್ಮಣನಿಗೂ ಗೋತ್ರ ಪ್ರವರಗಳಿದ್ದೇ ಇರುತ್ತವೆ. ಪ್ರತಿಯೊಬ್ಬ ಬ್ರಾಹ್ಮಣನ ಧಮನಿಯಲ್ಲಿಯೂ ಈ ಮಹಾತ್ಮರ ಒಂದು ರಕ್ತಕಣವಾದರೂ ಹರಿಯುತ್ತಿದೆ. ಇದನ್ನು ನೆನೆಸಿಕೊಂಡಾಗ ರೋಮಾಂಚನವಾಗುತ್ತದೆಯಲ್ಲವೆ? ರೋಮಾಂಚನವಾಗದಿದ್ದರೆ ಅವನು ಬ್ರಾಹ್ಮಣನೆನಿಸಿಕೊಳ್ಳಲು ಅರ್ಹನಲ್ಲ. ಒಬ್ಬ ಬ್ರಾಹ್ಮಣನ ಮುಖವನ್ನು ನೋಡಿದಾಗ ಆತನಲ್ಲಿ ಒಂದು ತೇಜಸ್ಸಿನ ಅಂಶ ಎದ್ದು ಕಾಣುತ್ತದೆ. ನಿತ್ಯಕರ್ಮಾನುಷ್ಠಾನದಲ್ಲಿ ನಿರತರಾದವರು ಯಾರೋ ಅವರಲ್ಲಿ ಈ ತೇಜಸ್ಸು ಇನ್ನೂ ಅಧಿಕವಾಗುತ್ತದೆ. ಇದನ್ನೇ ಬ್ರಹ್ಮವರ್ಚಸ್ಸು ಎನ್ನುವುದು. ಇಂದು ಬ್ರಾಹ್ಮಣವರ್ಗದಲ್ಲಿ ಸರ್ವೋತ್ತರವಾದ ಮೇಧಾಶಕ್ತಿಯೂ ಲೋಕೋಪಕಾರ ಬುದ್ಧಿಯೂ ಶಮದಮಾದಿಗುಣಗಳ ಒಂದಂಶವೂ ತೋರುತ್ತಿದ್ದರೆ, ಅದು ನಮ್ಮ ಪ್ರಾಚೀನ ಋಷಿಗಳಿಂದ ಬಳುವಳಿಯಾಗಿ ಬಂದದ್ದು.

ಸಮಸ್ತ ವಿಪ್ರ ವರ್ಗದವರಿಗೂ ಮೇಲಿನ ಮಾತುಗಳು ಅನ್ವಯಿಸುತ್ತವೆ. ವಿಶೇಷವಾಗಿ ನಮ್ಮ ಹವ್ಯಕ ಬಂಧುಗಳಲ್ಲಿ ಅರಿಕೆ ಮಾಡಿಕೊಳ್ಳಬೇಕಾದದ್ದುಂಟು. ಬನವಾಸಿಯಲ್ಲಿ ಆಳಿದ ಕದಂಬ ವಂಶದ ದೊರೆಯಾದ ಮಯೂರವರ್ಮನು ಉತ್ತರದ ಅಹಿಚ್ಛತ್ರದಿಂದ ಹವ್ಯಕರನ್ನು ತನ್ನ ದೇಶಕ್ಕೆ ಕರೆಸಿಕೊಂಡನೆಂದು ಸ್ಕಾಂದ ಪುರಾಣದ ಉತ್ತರ ಸಹ್ಯಾದ್ರಿ ಖಂಡದಲ್ಲಿದೆ. ಹೀಗೆ ಬ್ರಾಹ್ಮಣ ವರ್ಗವು ಈ ಪ್ರಾಂತಕ್ಕೆ ಬಂದಿತೆಂಬುದಕ್ಕೆ ಐತಿಹಾಸಿಕ ದಾಖಲೆಯೂ ದೊರೆಯುತ್ತದೆ. ತನ್ನ ರಾಜ್ಯದಲ್ಲಿ ಬ್ರಾಹ್ಮಣ್ಯವು ಕ್ಷೀಣಿಸಿದ್ದರಿಂದ ಶ್ರೇಷ್ಠರಾದ ವೈದಿಕರನ್ನು ಉತ್ತರ ದೇಶದಿಂದ ಇಲ್ಲಿಗೆ ಕರೆಸಿಕೊಂಡಿದ್ದಾನೆ. ಹವ್ಯಕವ್ಯಗಳೇ ಇವರಿಗೆ ಪ್ರಧಾನ ಲಕ್ಷಣಗಳಾದ್ದರಿಂದ ಹವ್ಯಕರೆಂಬ ಹೆಸರು ರೂಢಿಗೆ ಬಂದಿತು. ವಿಧ್ಯುಕ್ತವಾದ ದೇವತಾಕಾರ್ಯವು ಹವ್ಯವೆನಿಸುತ್ತದೆ. ಶ್ರಾದ್ಧಾದಿ ಪಿತೃಕಾರ್ಯವು ಕವ್ಯವೆನಿಸುತ್ತದೆ. ಇಂತಹ

ಹವ್ಯಕವ್ಯಗಳಲ್ಲಿ ನಿರತರಾಗಿ ಹವ್ಯಕರೆಂದೇ ಖ್ಯಾತಿ ಪಡೆದ ಈ ಜನರ ಧರ್ಮನಿಷ್ಠೆ ಎಷ್ಟು ತೀವ್ರವಾಗಿತ್ತೆಂಬುದನ್ನು ನೆನೆಸಿಕೊಳ್ಳಬೇಕು.

ಈ ಪ್ರಕಾರವಾಗಿ ಋಷಿ ಪರಂಪರೆಯಲ್ಲಿಯೂ ಹವ್ಯಕವ್ಯ ನಿರತರಾದ ವೈದಿಕರ ವಂಶದಲ್ಲಿಯೂ ಹುಟ್ಟಿದ ನಾವು ಈಗ ಹೇಗಿದ್ದೇವೆ, ಹೇಗಿರಬೇಕು, ಹೇಗಿರಬಾರದು ಎಂಬುದನ್ನು ಕ್ಷಣಕಾಲ ಪರ್ಯಾಲೋಚಿಸಬೇಡವೆ? ಸಿಕ್, ಮುಸ್ಲಿಂ, ಕ್ರೈಸ್ತ ಜನಾಂಗದವರು ಇಂದಿಗೂ ತಮ್ಮ ಮತಗಳಲ್ಲಿ ಎಷ್ಟು ಆಸಕ್ತಿಯನ್ನು ತಳೆದಿರುತ್ತಾರೆ ಎಂಬುದನ್ನು ಕಾಣಬಾರದೆ? ನಮಗೆ ಅಂಧಾನುಕರಣೆ ಏನೂ ಬೇಕಿಲ್ಲ. ಮತಾಂತರಕರಣಕ್ಕೆ ನಾವು ಹೊರಟವರೂ ಅಲ್ಲ. ಭಾರತ ದೇಶದಲ್ಲಿಯೇ ಅತ್ಯಲ್ಪ ಸಂಖ್ಯಾತರಾಗಿರುವ ಬ್ರಾಹ್ಮಣರು ಅದರಲ್ಲಿಯೂ ಹವ್ಯಕರು ಧರ್ಮಾಚರಣೆಯಲ್ಲಿ ಉಪೇಕ್ಷೆಯನ್ನು ತಳೆದಿರುವುದೂ ದಿನೇ ದಿನೇ ವೈದಿಕ ವಿದ್ಯೆಯಿಂದ ದೂರವಾಗುತ್ತಿರುವುದೂ ಅತ್ಯಂತ ಶೋಚನೀಯವಾದ ಸಂಗತಿ. ಪ್ರಾಚೀನ ವೈಭವವನ್ನು ಸ್ಮರಿಸಿಕೊಂಡರೆ ಬರುವ ಭಾಗ್ಯವೇನು? ಲವಲೇಶವಾದರೂ ವೈದಿಕ ಧರ್ಮಶ್ರದ್ಧೆ, ಕಾರ್ಯಗತವಾಗದಿದ್ದಾಗ ನಾವು ಋಷಿ ದ್ರೋಹಿಗಳೂ ನಮ್ಮ ಪ್ರಾಚೀನ ವೈದಿಕರ ವಂಶದಲ್ಲಿ ಜನ್ಮ ತಳೆಯಲು ಅನರ್ಹರೂ ಆಗುತ್ತೇವೆ.

ಹಾಗೆಂದು ಇಂದು ಸರ್ವನಾಶವಾಗಿಲ್ಲ. ವೈದಿಕಮಾರ್ಗವು ಸನಾತನ ಧರ್ಮ. ಸನಾತನವೆಂದರೆ ಶಾಶ್ವತವಾದದ್ದು. ಕೊಂಬೆಗಳನ್ನು ಎಷ್ಟು ಕಡಿದರೂ ಮರದ ಬೇರು ದೃಢವಾಗಿ ಸಾರವತ್ತಾಗಿರುವುದರಿಂದ ಚಿಗುರುತ್ತಲೇ ಇರುವುದು. ಈಗಲೂ ವೈದಿಕ ಧರ್ಮಾಭಿಮಾನಿಗಳೂ ವೈದಿಕ ವಿದ್ವಾಂಸರೂ ಧರ್ಮನಿಷ್ಠರೂ ಇದ್ದಾರೆ. ಮತ್ತೆ ವಿವೇಕೋದಯವಾಗಿ ಪೂರ್ವಜರ ಮಾರ್ಗವನ್ನು ಯಥಾಶಕ್ತಿ ಅನುಸರಿಸಿ ನಡೆಯಬೇಕೆಂದು ಅಪೇಕ್ಷಿಸತಕ್ಕವರೂ ಇದ್ದಾರೆ. ರಾಜಕೀಯ ಮತ್ತು ಸಾಮಾಜಿಕ ಕಾರಣಗಳಿಂದ ಜನರ ಜೀವನ ಮಾರ್ಗ ಜಟಿಲವಾಗಿದೆ. ಹವ್ಯಕ ಬಂಧುಗಳು ನಾನಾ ವೃತ್ತಿಗಳಲ್ಲಿ ತೊಡಗಿ ಜೀವಿಕೆಗಾಗಿ ಶ್ರಮಿಸುತ್ತಿದ್ದಾರೆ. ನಗರಗಳಲ್ಲಿಯೂ ದೂರದೇಶಗಳಲ್ಲಿಯೂ ನೆಲೆಸಿದ್ದಾರೆ. ಅಮೇರಿಕ ಮುಂತಾದ ವಿದೇಶಗಳಿಗೂ ಹೋಗಿದ್ದಾರೆ. ಈ ಜನರಲ್ಲಿ ಬಹು ಮಂದಿಗೆ ಧರ್ಮದಲ್ಲಿ ಆಸಕ್ತಿಯಿದೆ. ಈಗಿನ ವಿದ್ಯಾಭ್ಯಾಸ ಪದ್ಧತಿಯೇ ವಿಲಕ್ಷಣವಾದ್ದರಿಂದ ಭಾರತೀಯ ಸಂಸ್ಕೃತಿಯ ವಿಷಯವೇ ಅವರಿಗೆ ತಿಳಿದಿಲ್ಲ. ಇನ್ನು ವೈದಿಕ ಧರ್ಮಕರ್ಮಗಳ ಪರಿಚಯ ಹೇಗಾಗಬೇಕು? ಧಾರ್ಮಿಕ ವಿಚಾರವಾಗಿ ನಮಗೆ ಯಾರೂ ಮಾರ್ಗದರ್ಶನ ಮಾಡಲಿಲ್ಲ. ಶಾಲಾ ಕಾಲೇಜುಗಳಲ್ಲಂತೂ ಅದರ ಪ್ರಸ್ತಾವವೇ ಇಲ್ಲ. ದೂರ ದೇಶಕ್ಕೆ

ಹೋಗಿ ಇಕ್ಕಟ್ಟಿನ ಪರಿಸ್ಥಿತಿಯಲ್ಲಿರುವ ನಮಗೆ ಸಂಧ್ಯಾವಂದನೆ, ದೇವರ ಪೂಜೆ, ತಂದೆ–ತಾಯಿಗಳ ಶ್ರಾದ್ಧ ಇವನ್ನು ಮಾಡಲು ಸಾಧ್ಯವೇ? ಎಂದು ಹೇಳತಕ್ಕವರಿದ್ದಾರೆ. ಯಥಾಶಕ್ತಿಯಾಗಿ ಬ್ರಾಹ್ಮಣ ಧರ್ಮವನ್ನು ಪಾಲಿಸಬೇಕು, ಅದಕ್ಕೆ ಮಾರ್ಗ ಯಾವುದು? ಎಂಬ ತವಕ ಯಾರಿಗಿದೆಯೋ ಅವರಿಗಾಗಿ ಈ ಗ್ರಂಥದ ನಿರ್ಮಾಣ. ಬೆಂಗಳೂರಿನ ಅಖಿಲ ಹವ್ಯಕ ಮಹಾಸಭೆಯು ಯುವಕ ಯುವತಿಯರಾದ ಹವ್ಯಕಬಂಧುಗಳಿಗೆ ಧಾರ್ಮಿಕವಾದ ಮಾರ್ಗದರ್ಶನವನ್ನು ಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿ ಈ ಗ್ರಂಥದ ನಿರ್ಮಾಣ ಕಾರ್ಯದಲ್ಲಿ ತೊಡಗಿತು. ಯಾರ ಅಂತರಂಗದಲ್ಲಿ ಧರ್ಮದ ಬೀಜವಿದೆಯೋ ನೀರಿಲ್ಲದೆ ಮೊಳಕೆಯಾಗದೆ ಚಿಗುರದೆ ಇದೆಯೋ ಅಂತಹವರ ಅಂತರಂಗಕ್ಕೆ ಇದು ಜಲಸೇಚನ.

ದೇಶಕಾಲಾನುರೋಧವಾಗಿ ಧರ್ಮ ಶಾಸ್ತ್ರದಲ್ಲಿ ಪರಿವರ್ತನೆಯಾಗಿದೆ ಎಂಬುದಕ್ಕೆ ಶಾಸ್ತ್ರಗ್ರಂಥಗಳಲ್ಲಿಯೇ ದಾಖಲೆಯುಂಟು. ಈ ವೈಜ್ಞಾನಿಕ ಯುಗದ ವಿಷಮ ಪರಿವರ್ತನೆಯಲ್ಲಿ ಇನ್ನೂ ಕೆಲವು ತಿದ್ದು ಪಡಿಗಳು ಅವಶ್ಯಕವೆನಿಸುತ್ತದೆ. ಈ ರೀತಿ ತಿದ್ದುಪಡಿ ಮಾಡುವುದಕ್ಕೆ ನಮಗೆ ಯಾವ ಅಧಿಕಾರವು ಇಲ್ಲವೆಂಬುದು ನಮಗೆ ಸ್ಪಷ್ಟವಾಗಿ ಗೊತ್ತಿದೆ. ಯಾರಿಗೆ ತಿದ್ದುಪಡಿ ಮಾಡಲು ಅಧಿಕಾರವಿದೆಯೆಂದು ನಾವು ಸಮ್ಮತಿಸುತ್ತೇವೋ ಅವರು ತಟಸ್ಥರಾಗಿದ್ದು ಕಾರ್ಯ ಪ್ರವೃತ್ತರಾಗುತ್ತಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಧಾರ್ಮಿಕ ತಂತು ಇನ್ನೂ ಉಳಿದುಕೊಂಡಿರಲಿ, ಕತ್ತರಿಸಿ ಹೋಗದಿರಲಿ ಎಂಬ ಕಳಕಳಿಯಿದ್ದವರು ಏನು ಮಾಡಬೇಕು? ಶಾಸ್ತ್ರದಲ್ಲಿ ಆಪದ್ಧರ್ಮ ಎಂಬುದೊಂದಿದೆ. ಆಪತ್ಕಾಲದಲ್ಲಿ ವಿಧಿಗಳ ಸಂಕ್ಷೇಪ, ಏಕಾಂಶ ತ್ಯಾಗ, ಕೆಲವು ವೇಳೆ ಪೂರ್ಣ ತ್ಯಾಗಗಳಿಗೂ ಅವಕಾಶವನ್ನು ಶಾಸ್ತ್ರಕಾರರು ಕಲ್ಪಿಸಿದ್ದಾರೆ.

ಸ್ವಗ್ರಾಮೇ ಪೂರ್ಣ ಆಚಾರಃ ಪರಗ್ರಾಮೇತದರ್ಧಕಂ ।
ನಗರೇ ಪಾದ ಆಚಾರಃ ಪಥಿ ಶೂದ್ರವದಾಚರೇತ್ ।

ಎಂದು ಹೇಳಿರುವುದರ ತಾತ್ಪರ್ಯವೇನು?

ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ ।

ಎಂಬ ನೀತಿಶಾಸ್ತ್ರವೂ ನಮಗೆ ಮಾರ್ಗದರ್ಶನ ಮಾಡುತ್ತದೆ. ಸಂಧ್ಯಾವಂದನೆಯನ್ನು ಪೂರ್ತಿ ಮಾಡಲಾಗದಿದ್ದರೆ ಹತ್ತು ಗಾಯತ್ರೀ

ಜಪವನ್ನಾದರೂ ಮಾಡು. ದೇವರ ಪೂಜೆ ಮಾಡಲಾಗದಿದ್ದರೆ, ದೇವರೆದುರಿಗೆ ದೀಪ ಹಚ್ಚಿ, ಒಂದು ಊದಿನ ಕಡ್ಡಿಯನ್ನು ಹಚ್ಚಿಟ್ಟು ನಮಸ್ಕಾರವನ್ನಾದರೂ ಮಾಡು ಎಂದು ಹಿರಿಯರು ನಮಗೆ ಹೇಳಿದ ಬುದ್ಧಿವಾದವೇ ಈ ಗ್ರಂಥ ರಚನೆಯಲ್ಲಿ ಮೂಲಸೂತ್ರ.

ಧರ್ಮಶ್ರದ್ಧೆಯುಳ್ಳ ವೈದಿಕರಲ್ಲಿಯೇ ಕರ್ಮಾಚರಣೆ ಲುಪ್ತವಾಗುತ್ತಿದೆ. ಲುಪ್ತವಾಗಿಯೂ ಇದೆ. ನಮ್ಮಲ್ಲಿ ಎಷ್ಟು ಜನರು ನಿತ್ಯತರ್ಪಣ, ವೈಶ್ವದೇವಗಳನ್ನಾಚರಿಸುತ್ತಿದ್ದಾರೆ? ಅಗ್ನಿಹೋತ್ರವನ್ನಿಟ್ಟುಕೊಂಡವರು ಎಷ್ಟು ಜನ? ಇವನ್ನು ಬಿಟ್ಟುಬಿಡಲು ಯಾವ ಶಾಸ್ತ್ರಾಧಾರ ಉಂಟು?

ಇಂದಿನ ಪೀಳಿಗೆಯವರಿಗೆ ತಮ್ಮ ಗೋತ್ರ ಪ್ರವರಗಳು ಗೊತ್ತಿಲ್ಲ. ತಮ್ಮ ವೇದಶಾಖೆ ಯಾವುದೆಂಬುದು ತಿಳಿದಿಲ್ಲ. ಅಜ್ಜ– ಅಜ್ಜಿ, ಮುತ್ತಜ್ಜ–ಮುತ್ತಜ್ಜಿಯವರ ಹೆಸರು ಸಹ ಮರೆತುಹೋಗಿದೆ. ಕೊರಳಲ್ಲಿ ಜನಿವಾರವೇ ಇರುವುದಿಲ್ಲ. ಇಂತಹ ಧರ್ಮಕ್ಷೋಭೆಯುಂಟಾಗಿರುವಾಗ ಸಮಾಜದ ಹಿರಿಯರು ಕಣ್ಣುಮುಚ್ಚಿ ಕುಳಿತಿರಬೇಕೆ? ಅಥವಾ ಈ ಪೀಳಿಗೆಯವರಿಗೆ ಯಥಾಶಕ್ತಿಯಾಗಿ ಮಾರ್ಗದರ್ಶನವನ್ನು ಮಾಡಬೇಕೆ? ''ರಾಜಾ ಕಾಲಸ್ಯ ಕಾರಣಂ, ಕಾಲಾಯ ತಸ್ಮೈ ನಮಃ'' ಎಂಬ ಹಾರಿಕೆಯ ಮಾತು ಉತ್ತರವಾಗದು.

ಕರ್ಮವಿಧಿಗಳಲ್ಲಿರುವ ಸಾರಭಾಗವನ್ನು ಗ್ರಹಿಸಿ, ಇಷ್ಟನ್ನಾದರೂ ಮಾಡಿರಿ, ಇಷ್ಟನ್ನು ಮಾಡಲು ನಿಮಗೆ ಸಾಧ್ಯ. ಇದನ್ನೂ ಆಚರಿಸದಿದ್ದಲ್ಲಿ ಹವ್ಯಕರೆಂದುಕೊಳ್ಳಲು ನೀವು ಅರ್ಹರಲ್ಲ. ''ಬ್ರಾಹ್ಮಣಧರ್ಮವನ್ನೂ ಶೂನ್ಯಗೊಳಿಸಿ ನೀವೂ ಸರ್ವಶೂನ್ಯರಾಗಬೇಡಿ'' ಎಂದು ಬೋಧಿಸುವುದು ಈ ಗ್ರಂಥರಚನೆಯ ಉದ್ದೇಶ. ಇದೇ ಧರ್ಮಶಾಸ್ತ್ರವೆಂದೂ ಶಾಸ್ತ್ರೀಯವಾದ ಸಮಗ್ರ ಅನುಷ್ಠಾನವು ಇದರಲ್ಲಿ ಅಡಕವಾಗಿದೆಯೆಂದೂ ಯಾರೂ ಭ್ರಮಿಸಬಾರದು. ಯಾರಿಗೆ ಕರ್ಮಾನುಷ್ಠಾನದಲ್ಲಿ ಅಧಿಕವಾದ ಶ್ರದ್ಧಾಭಕ್ತಿಗಳಿವೆಯೋ ಅನುಷ್ಠಾನಕ್ಕೆ ಬೇಕಾದ ಸೌಕರ್ಯಗಳೂ ಇವೆಯೋ ಅವರು ಈ ಶಾಸ್ತ್ರ ವಿಧಿಗಳನ್ನು ಸರಿಯಾಗಿ ತಿಳಿದುಕೊಂಡು ಕ್ರಮವಾಗಿಯೇ ಪಾಲಿಸಲಿ. ಅಂಥವರು ನಮಗೆ ಸದಾ ಪೂಜಾರ್ಹರು. ಬ್ರಾಹ್ಮಣ ಸಂಸ್ಕಾರದ ಬೀಜವನ್ನಾದರೂ ಉಳಿಸಿ ಸಂರಕ್ಷಿಸಬೇಕೆಂಬುದು ನಮ್ಮ ಉದ್ದೇಶ. ದೈವೇಚ್ಛೆಯಿಂದ ಸರಿಯಾದ ಕಾಲ ಬಂದು ಮಳೆ ಸುರಿದರೆ ಬೀಜವು ಮೊಳೆತು ಸರಿಯಾಗಿ ಬೆಳೆದೀತು. ಈ ಬೀಜವನ್ನುಳಿಸಲು

ನಮ್ಮ ಮಹಿಳೆಯರಿಂದ ವಿಶೇಷವಾದ ಸಹಕಾರವು ಅವಶ್ಯಕವಾಗಿ ಬೇಕು. ಆದ್ದರಿಂದ ಮಹಿಳೆಯರಿಗಾಗಿ ಕೆಲವು ಸೂಚನೆಗಳನ್ನು ಬರೆದು ಈ ಪುಸ್ತಕದಲ್ಲಿ ಅಳವಡಿಸಲಾಗಿದೆ. ಅವರು ನಿಜವಾದ ಆಸಕ್ತಿಯನ್ನು ವಹಿಸಿದರೆ ನಮ್ಮ ಉದ್ದೇಶ ಬಹುಮಟ್ಟಿಗೆ ಸಾರ್ಥಕವಾಗಂತೆಯೇ.

ಬೆಂಗಳೂರಿನ ಶ್ರೀ ಅಖಿಲ ಹವ್ಯಕ ಮಹಾಸಭೆಯು ಸ್ತುತ್ಯವಾದ ಕಾರ್ಯವನ್ನು ಕೈಗೊಂಡಿದೆ. ಈ ಪುಸ್ತಕದ ರಚನೆಯ ಉದ್ದೇಶವೂ ಪ್ರಕಟಣೆಯೂ ಪ್ರಶಂಸನೀಯವಾದವು. ಈ ಕಾಲದಲ್ಲಿ ಸಮಸ್ತ ಬ್ರಾಹ್ಮಣರಿಗೆ–ವಿಶೇಷವಾಗಿ ಹವ್ಯಕರಿಗೆ ಉಪಯುಕ್ತವಾದ ಕೈಪಿಡಿ ಇದು. ಇದರಲ್ಲಿ ದೋಷವನ್ನು ಹುಡುಕತಕ್ಕವರು ಯಾವ ಉದ್ದೇಶದಿಂದ ಈ ಧಾರ್ಮಿಕ ವಿಧಿಯನ್ನು ಸಂಗ್ರಹಿಸಲಾಗಿದೆ, ಯಾರಿಗಾಗಿ ಇದನ್ನು ಬರೆಯಲಾಗಿದೆ – ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರಬೇಕು.

ಈ ಪುಸ್ತಕವನ್ನು ರಚಿಸುವುದಕ್ಕಾಗಿ ಶ್ರೀ ಅಖಿಲ ಹವ್ಯಕ ಮಹಾಸಭೆಯ ಅಧ್ಯಕ್ಷರು ಕೆಳಗೆ ಕಂಡಂತೆ ಒಂದು ಧಾರ್ಮಿಕ ಸಮಿತಿಯನ್ನು ರಚಿಸಿದರು.

1. ವಿದ್ವಾನ್ ಎನ್. ರಂಗನಾಥಶರ್ಮಾ ನಡಹಳ್ಳಿ (ಅಧ್ಯಕ್ಷರು)
2. ವಿದ್ವಾನ್ ಕೆ. ಎಸ್. ಭಾಸ್ಕರಭಟ್ಟರು, ಭೀಮನಕೋಣೆ
3. ವಿದ್ವಾನ್ ರಾಮಚಂದ್ರಶರ್ಮಾ, ತ್ಯಾಗಲಿ
4. ವಿದ್ವಾನ್ ಗಜಾನನಜೋಶಿ ಮಾರ್ಕಾಂಡೆ, ಗೋಕರ್ಣ
5. ವೇ. ಬ್ರ. ಮಂಜುನಾಥಭಟ್ಟರು
6. ಶ್ರೀ ಎದುರ್ಕುಳ ಶಂಕರನಾರಾಯಣಭಟ್ಟರು, ಭಾಗಮಂಡಲ
7. ಶ್ರೀ ಎಸ್. ಆರ್. ಭಾಗವತರು

(ಶ್ರೀ ಅಖಿಲ ಹವ್ಯಕ ಮಹಾಸಭೆಯ ಗೌ. ಪ್ರ. ಕಾರ್ಯದರ್ಶಿಗಳು (ಧಾರ್ಮಿಕ ಸಮಿತಿಯ ಸಂಚಾಲಕರು)

ಈ ಸಮಿತಿಯು ಹಲವು ಬಾರಿ ಸಭೆ ಸೇರಿ ಈ ಪುಸ್ತಕದ ಉದ್ದೇಶ, ಅಳವಡಿಸಬೇಕಾದ ವಿಷಯ, ವಿಧಿ ಪ್ರಕಾರ– ಮುಂತಾದವುಗಳನ್ನು ಕೂಲಂಕಷವಾಗಿ ಚರ್ಚಿಸಿ ನಿರ್ಣಯಿಸಿದ್ದರ ಫಲವಾಗಿ ಈ ಸಂಕ್ಷಿಪ್ತ ಧಾರ್ಮಿಕ

ವಿಧಿಯ ನಿರ್ವಾಣವಾಗಿದೆ. ಎಲ್ಲರೂ ಸಲಹೆ ಸೂಚನೆಗಳನ್ನು ಕೊಟ್ಟು ಉಪಕರಿಸಿದ್ದಾರೆ. ಗೋಕರ್ಣದ ವಿದ್ವಾನ್ ಗಜಾನನ ಜೋಶಿಯವರು ಮಾತ್ರ ಸಮಿತಿಯ ಯಾವ ಸಭೆಯಲ್ಲಿಯೂ ಉಪಸ್ಥಿತರಾಗಿರಲಿಲ್ಲ.

ಕೆಳಗೆ ಕಂಡಂತೆ ಸಮಿತಿಯ ಸದಸ್ಯರು ಧಾರ್ಮಿಕ ವಿಧಿಗಳನ್ನು ಸಂಗ್ರಹಿಸಿ ಲೇಖನಗಳನ್ನು ಬರೆದುಕೊಟ್ಟಿದ್ದಾರೆ.

1. ವಿದ್ವಾನ್ ಕೆ. ಎಸ್. ಭಾಸ್ಕರ ಭಟ್ಟರು – ಸಂಧ್ಯಾವಂದನೆ, ಅಗ್ನಿಕಾರ್ಯ
2. ವಿದ್ವಾನ್ ರಾಮಚಂದ್ರ ಶರ್ಮಾ ತ್ಯಾಗಲಿ – ಪಂಚಗವ್ಯ, ಪಂಚಾಮೃತ ವಿಧಿ, ಯಜ್ಞೋಪವೀತ ಪೂಜಾ–ಧಾರಣ, ಉತ್ಸರ್ಜನ–ಉಪಾಕರ್ಮ, ವರ್ಷದಲ್ಲಿ ಬರುವ ವಿಶೇಷ ಪೂಜಾ ದಿನಗಳು, ದ್ವಾದಶ ನಾಮಾವಳಿ, ಅಷ್ಟೋತ್ತರ ಶತನಾಮಾವಳಿ, ಪ್ರಾರ್ಥನಾ ಸ್ತೋತ್ರಗಳು.
3. ಶ್ರೀ ಎದುರ್ಕಳ ಶಂಕರನಾರಾಯಣ ಭಟ್ಟರು– ಬ್ರಾಹ್ಮಣ್ಯದ ಮಹತ್ವ ಮತ್ತು ಪರಿಪಾಲನೆ.

ಈ ಎಲ್ಲಾ ಮಹನೀಯರಿಗೂ ನಾನು ಕೃತಜ್ಞನಾಗಿದ್ದೇನೆ. ಈ ಪುಸ್ತಕದಲ್ಲಿರುವ ಉಳಿದ ಎಲ್ಲ ಧಾರ್ಮಿಕ ವಿಧಿಗಳನ್ನೂ ಪರಿಶಿಷ್ಟ ಲೇಖನಾದಿಗಳನ್ನೂ ಸ್ವತಃ ನಾನೇ ಬರೆದಿರುತ್ತೇನೆ.

# ಕೃತಜ್ಞತಾ ಸಮರ್ಪಣೆ

ಇಂತಹ ಒಂದು ಗ್ರಂಥದ ಅವಶ್ಯಕತೆಯನ್ನು ಗ್ರಹಿಸಿ, ಶ್ರೀ ಅಖಿಲ ಹವ್ಯಕ ಮಹಾಸಭೆಯ ಅಧ್ಯಕ್ಷರಾದ ಶ್ರೀ ಎಸ್. ಪಿ. ಭಟ್ಟರು ಈ ಧಾರ್ಮಿಕ ಸಮಿತಿಯನ್ನು ರಚಿಸಿ ಎಲ್ಲ ವಿಧವಾದ ಸೌಕರ್ಯ ಪ್ರೋತ್ಸಾಹಗಳನ್ನೂ ನಮಗೆ ಒದಗಿಸಿಕೊಟ್ಟಿದ್ದಾರೆ. ಈ ಮಹನೀಯರಿಗೆ ಧಾರ್ಮಿಕ ಸಮಿತಿಯ ಪರವಾಗಿ ಕೃತಜ್ಞತಾಪೂರ್ವಕವಾದ ಹಾರ್ದಿಕ ಪ್ರಣಾಮಗಳನ್ನರ್ಪಿಸುತ್ತೇನೆ. ಧಾರ್ಮಿಕ ಸಮಿತಿಯ ಸಂಚಾಲಕರೂ, ಶ್ರೀ ಅಖಿಲ ಹವ್ಯಕ ಮಹಾಸಭೆಯ ಗೌ.ಪ್ರ. ಕಾರ್ಯದರ್ಶಿಗಳೂ ಆದ ಶ್ರೀ ಎಸ್. ಆರ್. ಭಾಗವತರು ಈ ಸಮಿತಿಯ ಎಲ್ಲ ಕಾರ್ಯಕಲಾಪಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸಿ, ಅಮೂಲ್ಯ ಸಲಹೆಗಳನ್ನಿತ್ತು ನಮಗೆ ಬೇಕಾದ ಸೌಕರ್ಯಗಳನ್ನೂ ಕೊಟ್ಟು ಸಹಕರಿಸಿದ್ದಾರೆ. ಈ ಮಹನೀಯರಿಗೂ ಹವ್ಯಕ ಮಹಾಸಭೆಯ ಸಿಬ್ಬಂದಿ ವರ್ಗದವರಿಗೂ ಸಮಿತಿಯ ಪರವಾಗಿಯೂ ವೈಯಕ್ತಿಕವಾಗಿಯೂ ನನ್ನ ವಂದನೆಗಳು ಸಲ್ಲುತ್ತವೆ. ಈ ಕೃತಿ ರಚನೆಯಲ್ಲಿ ಭಾಗವಹಿಸಿ, ಉಪಕರಿಸಿದ ಧಾರ್ಮಿಕ ಸಮಿತಿಯ ಎಲ್ಲ ಸದಸ್ಯರಿಗೂ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಬ್ರಾಹ್ಮಣ್ಯಂ ಪರಿಪಾಲಯಂತು ವಿಬುಧಾ ಬ್ರಹ್ಮರ್ಷಿವಂಶೋದ್ಭವಾಃ ।
ಕರ್ಮ ಬ್ರಹ್ಮಸಮುದ್ಭವಂ ವಿಜಹತಾಂ ವ್ಯರ್ಥಂ ಪುನರ್ಜೀವಿತಮ್ ।
ನಾನಾಪುಣ್ಯಸಮಾರ್ಜಿತಂ ಬಹುಫಲಂ ಹಸ್ತಸ್ಥಚಿಂತಾಮಣಿಂ ।
ಕಃ ಪ್ರಾಜ್ಞೋ ವ್ಯವಧೂಯ ಭೋ ಮೃಗಯತೇ
ಯತ್ಪಾಮರೈಕಪ್ರಿಯಮ್ ॥

ಬೆಂಗಳೂರು
ತಾ : 22–3–1992

ಎನ್. ರಂಗನಾಥಶರ್ಮಾ
ಅಧ್ಯಕ್ಷರು
ಧಾರ್ಮಿಕ ಸಮಿತಿ

# ಬ್ರಾಹ್ಮಣ್ಯದ ಮಹತ್ತ್ವ ಮತ್ತು ಪರಿಪಾಲನೆ

ಬ್ರಾಹ್ಮಣ್ಯ ಎಂದರೆ ಬ್ರಹ್ಮತೇಜಸ್ಸಿನ ಸಂಪತ್ತೆಂದು ತಾತ್ಪರ್ಯವಾಗಿ ಹೇಳಬಹುದು. ಬ್ರಹ್ಮ ಅರ್ಥಾತ್ ಪರಮಾತ್ಮಶಕ್ತಿಯನ್ನು ವೇದಾದಿ ಶಾಸ್ತ್ರಾನುಸಾರಿಯಾದ ಕರ್ಮಾನುಷ್ಠಾನದ ಮೂಲಕ ಬಾಳಿನಲ್ಲಿ ವಿಶೇಷವಾಗಿ ಅಭಿವ್ಯಕ್ತಗೊಳಿಸಿ ಬ್ರಹ್ಮತೇಜೋವಂತರಾಗಿ ಬಾಳುವವರು ಬ್ರಾಹ್ಮಣರು.

ಬ್ರಾಹ್ಮಣನ ಗುಣಧರ್ಮಗಳು ಅವನ ಹುಟ್ಟಿನ ನಂತರ ಯಥೋಚಿತವಾದ ಸಂಸ್ಕಾರಗಳ ಫಲದಿಂದ ಅರಳಿ ಬೆಳಗುತ್ತವೆ. ಹಾಗಾಗಿ ಮೂಲತಃ ಬ್ರಾಹ್ಮಣನಲ್ಲಿ ಆ ಗುಣಗಳು ಹುಟ್ಟಿನಿಂದಲೇ ಬೀಜರೂಪದಲ್ಲಿ ಇರುತ್ತವೆ ಎನ್ನುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಬ್ರಾಹ್ಮಣನು ಹುಟ್ಟಿನಿಂದಲೇ ಬ್ರಾಹ್ಮಣನಾಗಿದ್ದು ಆದರೆ, ಗುಣಯೋಗ್ಯತೆಗಳು ಅವನಲ್ಲಿ ಇನ್ನೂ ಅರಳದೆ ಸುಪ್ತವಾಗಿರುತ್ತವೆ. ಮುಂದೆ ಶಾಸ್ತ್ರೋಕ್ತವಾದ ಉಪನಯನಾದಿ ಸಂಸ್ಕಾರಗಳಿಂದ ದ್ವಿಜನಾಗಿ ಅಂದರೆ ಇನ್ನೊಂದು ಹೊಸದಾದ ಜನ್ಮವನ್ನು ಪಡೆದಂತವನಾಗಿ ಸಂಧ್ಯಾವಂದನಾದಿ ಉಪಸಾನೆ, ಸದಾಚಾರ– ಸತ್ಕರ್ಮಗಳಿಂದ ಜೀವನದಲ್ಲಿ ಸಾಗುತ್ತಾ ಬ್ರಹ್ಮತೇಜೋ ಸಂಪನ್ನನಾದ ಬ್ರಾಹ್ಮಣನಾಗಿ ಬೆಳಗುತ್ತಾನೆ. ಗೀತಾಚಾರ, ಭಗವಾನ್ ಶ್ರೀ ಕೃಷ್ಣನು ತನ್ನನ್ನು ನಂಬಿ ಭರವಸೆ ನೀಡಿ ಇನ್ನು ಬ್ರಾಹ್ಮಣರು ತನಗೆ ಶರಣಾದಾಗ ಅವರಿಗೆ ಮುಕ್ತಿಯನ್ನು ಅನುಗ್ರಹಿಸುತ್ತೇನೆ ಎನ್ನುವುದರಲ್ಲಿ ಸಂಶಯವೇನಿದೆ ಎಂಬುದನ್ನು ಶ್ರೀಮದ್‌ಭಗವದ್ಗೀತೆಯ ಒಂಭತ್ತನೇ ಅಧ್ಯಾಯದಲ್ಲಿ ಹೇಳುತ್ತಾ ಬ್ರಾಹ್ಮಣರನ್ನು 'ಬ್ರಾಹ್ಮಣಾಃ ಪುಣ್ಯಾಃ'– ಬ್ರಾಹ್ಮಣರು ಪುಣ್ಯಶೀಲರು ಎಂಬುದಾಗಿ ಪ್ರತ್ಯೇಕವಾಗಿ ಪ್ರಶಂಸಿಸಿರುತ್ತಾನೆ. ಸ್ವಭಾವದಿಂದ ಉಂಟಾಗಿರುವ ಬ್ರಾಹ್ಮಣಕರ್ಮಗಳು ಯಾವುವು ಎಂಬುದನ್ನು ಸ್ಪಷ್ಟಪಡಿಸುತ್ತಾ ಗೀತಾಚಾರ್ಯ ಭಗವಾನ್ ಶ್ರೀಕೃಷ್ಣನು, ''ಶಮೋದಮಸ್ತಪಃ ಶೌಚಂ ಕ್ಷಾಂತಿರಾರ್ಜನ ಮೇವಚ। ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ'' ಅಂದರೆ ಶಮ, ದಮ, ತಪಸ್ಸು, ಶೌಚ, ಕ್ಷಮೆ, ಸರಳತೆ, ಜ್ಞಾನ, ಅನುಭವ ಮತ್ತು ಆಸ್ತಿಕ ಭಾವ ಇವುಗಳು ಎಂಬುದಾಗಿ ಹೇಳಿರುತ್ತಾನೆ. ಪ್ರಾತಃ ಸ್ಮರಣೀಯರಾದ ಶ್ರೀ ಆದಿಶಂಕರಾಚಾರ್ಯರು ಬ್ರಾಹ್ಮಣ ಜನ್ಮ–ಬ್ರಾಹ್ಮಣತ್ವದ ಹಿರಿಮೆ ಬಗೆಗೆ ತಮ್ಮ 'ವಿವೇಕ ಚೂಡಾಮಣಿ' ಎಂಬ ಪ್ರಕರಣ ಗ್ರಂಥದಲ್ಲಿ

ವಿವರಿಸುತ್ತಾ ''ಜಂತೂನಾಂ ನರಜನ್ಮ ದುರ್ಲಭ ಮತಃ ಪುಂಸ್ತ್ವಂ ತತೋ ವಿಪ್ರತಾ– ಅಂದರೆ ಮನುಷ್ಯ ಜನ್ಮವು ದೊರಕುವುದು ಕಷ್ಟ. ಅದರಲ್ಲೂ ಬ್ರಾಹ್ಮಣ ಜನ್ಮ– ಬ್ರಾಹ್ಮಣತ್ವ ಲಭಿಸುವುದು ದುರ್ಲಭವೇ ಸರಿ ಎಂಬುದಾಗಿ ಹೇಳಿರುತ್ತಾರೆ.

ಜಗತ್ತಿನಲ್ಲಿನ ಎಲ್ಲ ಬಲಗಳಲ್ಲಿ ಬ್ರಹ್ಮತೇಜಸ್ಸಿನ ಬಲವೇ ಶ್ರೇಷ್ಠವಾದ ಬಲ. ಅದರಿಂದ ಇಹಪರ ಬದುಕಿಗೆ ಸಂಬಂಧಿಸಿದಂತೆ ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ವಿಧದ ಪುರಷಾರ್ಥಗಳನ್ನು ಪೂರ್ಣವಾಗಿ ಸಾಧಿಸಲು ಸಾಧ್ಯವಾಗುವುದು ಎನ್ನುವುದರಲ್ಲಿ ಸಂದೇಹವಿಲ್ಲ. ವೇದ ಕಾಲದ ವಿಶ್ವಾಮಿತ್ರ, ವಸಿಷ್ಠ, ಕಶ್ಯಪ, ಯಾಜ್ಞವಲ್ಕ್ಯಾದಿ ಮಹರ್ಷಿಗಳಿಂದ ಆಧುನಿಕ ಕಾಲದ ತನಕ ಸಾಗಿ ಬಂದ ಬ್ರಾಹ್ಮಣ ಪರಂಪರೆಯಲ್ಲಿ ಮೂಡಿಬಂದ ಅಸಂಖ್ಯಾತ ಬ್ರಾಹ್ಮಣ ಪ್ರಮುಖರ ಬದುಕು ಈ ಬಗೆಗೆ ಉಜ್ವಲ ಉದಾಹರಣೆಯಾಗಿರುತ್ತದೆ.

ಭಗವದ್ಭಕ್ತಿ, ಆತ್ಮನಿಷ್ಠೆ, ಇಂದ್ರಿಯಸಂಯಮ, ದಿವ್ಯಜ್ಞಾನಪ್ರಸಾರ, ಸತ್ಯ, ಪ್ರಾಮಾಣಿಕತೆ, ಕಾರ್ಯಕುಶಲತೆ, ಪರೋಪಕಾರ ಇತ್ಯಾದಿ ಸದ್ಗುಣಗಳು ಬ್ರಹ್ಮ ಶಕ್ತಿಯ ವಿಕಾಸ ಹಾಗೂ ಪ್ರಕಾಶನದ ಲಕ್ಷಣಗಳಾಗಿದ್ದು ಇವನ್ನೇ ಒಟ್ಟಿನಲ್ಲಿ ಬ್ರಾಹ್ಮಣ ಧರ್ಮ, ಬ್ರಾಹ್ಮಣ್ಯ ಎಂದು ಹೇಳಬಹುದು. ಬ್ರಾಹ್ಮಣ ಸಮಾಜ ಸಶಕ್ತವೂ, ಸುಂದರವೂ ಆಗಿ ಬೆಳಗಬೇಕಾದರೆ ಬ್ರಾಹ್ಮಣ್ಯ ಶಕ್ತಿ ಪ್ರತಿಯೊಬ್ಬ ಬ್ರಾಹ್ಮಣನಲ್ಲಿ ವಿಶೇಷವಾಗಿ ವಿಕಾಸಗೊಂಡು ಬಾಳಿನಲ್ಲಿ ಪ್ರಕಟಗೊಳ್ಳಬೇಕು. ಬ್ರಾಹ್ಮಣ ಶಕ್ತಿಯು ದೇಶದಲ್ಲಿ ಹೆಚ್ಚು ಇದ್ದಷ್ಟು ಸಮಾಜಕ್ಕೆ ಕ್ಷೇಮ, ದೇಶಕ್ಕೆ ಭದ್ರತೆ, ಲೋಕಕ್ಕೆ ಅದರಿಂದ ಕಲ್ಯಾಣ ಎನ್ನುವುದರಲ್ಲಿ ಅನುಮಾನವಿಲ್ಲ.

ಬ್ರಾಹ್ಮಣ್ಯದ ರಕ್ಷಣೆಗಾಗಿ ಬ್ರಾಹ್ಮಣರು ತಮ್ಮ ಬದುಕಿನಲ್ಲಿ ಯಜನ–ಯಾಜನ–ಅಧ್ಯಯನ–ಅಧ್ಯಾಪನ–ದಾನ–ಪ್ರತಿಗ್ರಹ ಎಂಬ ಷಟ್ಕರ್ಮಗಳಲ್ಲಿ ನಿರತರಾಗಿ ಬಹುಮಂದಿ ಹಿಂದಿನ ಕಾಲದಲ್ಲಿ ಶ್ರಮಿಸಿ ಕೃತಾರ್ಥರಾಗಿರುತ್ತಾರೆ. ಬ್ರಾಹ್ಮಣ್ಯವು ಸತತವಾಗಿ ಕೃಷಿ ಮಾಡಿ ಬೆಳೆಸಿ ಉಳಿಸಿಕೊಳ್ಳಬೇಕಾದ ಸಂಪತ್ತಾಗಿದೆ. ಅದಕ್ಕಾಗಿ ಬ್ರಾಹ್ಮಣನು ತನ್ನ ಸ್ವಂತ ಜೀವನದಲ್ಲಿ ಬ್ರಹ್ಮತೇಜೋ ಸಂಪನ್ನನಾಗಲು ಕ್ರಮವಾಗಿ ಸ್ವಧರ್ಮ ಸ್ವಕರ್ಮಗಳ ಅನುಷ್ಠಾನ ತತ್ಪರನಾಗಬೇಕಾದುದು ಅನಿವಾರ್ಯ ಹಾಗೂ ಅಗತ್ಯವಾಗಿದೆ. ಈ ಸಂಬಂಧವಾಗಿ ವಿಚಾರ ಮಾಡುತ್ತಾ ನಮ್ಮ ಪ್ರಾಚೀನ ಮಹರ್ಷಿಗಳು ಬ್ರಾಹ್ಮಣನನ್ನು ಒಂದು ವೃಕ್ಷಕ್ಕೆ ಹೋಲಿಸಿ ಬ್ರಾಹ್ಮಣದ

ರಕ್ಷಣೆ, ಸಂಧ್ಯಾವಂದನೆಯ ಮಹತ್ವ ಇತ್ಯಾದಿ ವಿಚಾರವಾಗಿ ಹೀಗೆ ಸ್ಪಷ್ಟಪಡಿಸಿರುತ್ತಾರೆ.–

ವಿಪ್ರೋ ವೃಕ್ಷಃ ಮೂಲಮಸ್ಯಸ್ಯ ಸಂಧ್ಯಾ ।
ವೇದಾಃ ಶಾಖಾ ಧರ್ಮಕರ್ಮಾಣಿ ಪತ್ರಂ ॥
ತಸ್ಮಾನ್ಮೂಲಂ ಯತ್ನತೋ ರಕ್ಷಣೀಯಂ ।
ಛಿನ್ನೇ ಮೂಲೇ ನೈವ ವೃಕ್ಷೋ ನ ಶಾಖಾ ॥

– ದೇವೀ ಭಾಗವತ

ಬ್ರಾಹ್ಮಣನೆಂಬ ವೃಕ್ಷಕ್ಕೆ ಶಾಖೆಗಳೇ ವೇದಗಳು. ಧರ್ಮ ಕರ್ಮಾದಿಗಳೇ ಪತ್ರಗಳು. ಸಂಧ್ಯಾವಂದನೆಯೇ ಬೇರು. ಬೇರನ್ನು ಸರಿಯಾಗಿ ಪೋಷಿಸಿ ರಕ್ಷಿಸಿದರೆ ವೃಕ್ಷವು ಸುರಕ್ಷಿತವಾಗಿರುತ್ತದೆ. ಬೇರು ಭಿನ್ನವಾದರೆ ಮರವೂ ಇಲ್ಲ ಶಾಖೆಯೂ ಇಲ್ಲ ಎಂದು ಆಗುತ್ತದೆ.

ಬ್ರಾಹ್ಮಣನು ತನ್ನ ಜೀವನದಲ್ಲಿ ಸಾತ್ವಿಕ ಶಕ್ತಿಯನ್ನು ವಿಕಾಸಗೊಳಿಸಿ ಬ್ರಹ್ಮಶಕ್ತಿ ಸಂಪನ್ನನಾಗದಿದ್ದರೆ ಸರಿಯಾದ ಅರ್ಥದಲ್ಲಿ ಬ್ರಾಹ್ಮಣನಾಗಿ ಬಾಳಲು ಸಾಧ್ಯವಿಲ್ಲ. ಮಾತ್ರವಲ್ಲದೆ ಪ್ರಕೃತಿಯ ಸಹಜವಾದ ಚತುರ್ವರ್ಣ ವ್ಯವಸ್ಥೆಯಲ್ಲಿ ತನ್ನ ಹಿರಿಯ ಸ್ಥಾನಕ್ಕೆ ತಕ್ಕಂತೆ ತಾನು ಸಮರ್ಥನಾಗಿ ಇತರರಿಗೆ ಆದರ್ಶ ದ ಬೆಳಕಾಗಿ ಬಾಳಲೂ ಸಾಧ್ಯವಿಲ್ಲ. ಎಲ್ಲ ವರ್ಣದವರೂ ಒಂದು ಜನ್ಮದಲ್ಲಿ ಸಾಧ್ಯವಾಗದಿದ್ದರೆ ಕೊನೆಗೆ ಜನ್ಮಜನ್ಮಾಂತರದಲ್ಲಿ ಆದರೂ ವಿಕಾಸ ಹೊಂದಿ ಬ್ರಾಹ್ಮಣರಾಗಬೇಕು ಎಂಬುದೇ ಸನಾತನ ಹಿಂದೂ ಧರ್ಮದ ಕರೆ ಹಾಗೂ ಆಶ್ವಾಸನೆಯಾಗಿದೆ. ಹಾಗಾಗಿ ಎಲ್ಲ ಕಾಲಗಳಲ್ಲೂ ಬ್ರಾಹ್ಮಣರು ಬ್ರಾಹ್ಮಣ್ಯದ ರಕ್ಷಕರೂ, ಪೋಷಕರೂ ಆಗಿ ಆದರ್ಶವಾಗಿ ಬಾಳಬೇಕಾದುದು ಬ್ರಾಹ್ಮಣರ ಹಾಗೂ ಸಮಾಜದ ಇತರ ವರ್ಣದವರೂ ಸೇರಿದಂತೆ ಸರ್ವರ ಕಲ್ಯಾಣದ ದೃಷ್ಟಿಯಿಂದ ಅಗತ್ಯವಾಗಿದೆ.

ಜೀವನದಲ್ಲಿ ಏನನ್ನು ಸಾಧಿಸಬೇಕಾದರೂ ಅದಕ್ಕೊಂದು ನೀತಿ–ನಿಯಮ ತತ್ವ–ಸೂತ್ರಗಳ ಹಿನ್ನೆಲೆ–ಪ್ರೇರಣೆಗಳು ಇರಬೇಕು ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಬ್ರಾಹ್ಮಣ್ಯವು ಉಳಿದು ಬೆಳಗಬೇಕಾದರೆ ಬ್ರಾಹ್ಮಣರು ಆ ಬಗೆಗೆ ಅರಿವು–ಅಭಿಮಾನ ಉಳ್ಳವರಾಗಿರುವುದಲ್ಲದೆ ನಿಶ್ಚಯವಾಗಿ ಅನುಷ್ಠಾನಶೀಲರಾಗಿರಬೇಕು. ಅದಕ್ಕೆ ಬೇಕಾದ ಮಾರ್ಗದರ್ಶನ ಮತ್ತು

ಸ್ಫೂರ್ತಿಯನ್ನು ನಮ್ಮ ಗುರು ಪರಂಪರೆ, ವೇದಾದಿ ಶಾಸ್ತ್ರ ಗ್ರಂಥಗಳು ಅವುಗಳಿಗೆ ಭಾಷ್ಯವಾಗಿ ಬಾಳಿ ಬೆಳಗಿದ ಮಹರ್ಷಿಗಳು, ಆಚಾರ್ಯರು, ಗುರುಗಳು, ಮಹಾ ಪುರುಷರು ಹಾಗೂ ಮಹನೀಯರ ಜೀವನ ಸಂದೇಶಗಳಿಂದ ಪಡೆಯಬೇಕು.

ಸಾಮಾಜಿಕವಾಗಿ ಬ್ರಾಹ್ಮಣರಲ್ಲಿ ಇಂದು ವೈದಿಕರು ಮತ್ತು ಲೌಕಿಕರು ಎಂಬ ಎರಡು ವರ್ಗಗಳಿವೆ. ವೈದಿಕರು ವೇದಾಧ್ಯಯನ, ಅಧ್ಯಾಪನ, ಪೌರೋಹಿತ್ಯ ಇತ್ಯಾದಿ ಸನಾತನ ಧರ್ಮ ಸಂಪ್ರದಾಯ ಬದ್ಧವಾದ ಕರ್ಮಮಾರ್ಗಗಾಮಿ ಗಳಾಗಿರುತ್ತಾರೆ. ಸಾಮಾಜಿಕವಾಗಿ ಬ್ರಾಹ್ಮಣರು ಹೀಗೆ ಎರಡು ವರ್ಗದವರಾಗಿ ವಿಭಾಗಗೊಂಡಿರುತ್ತಾರೆ ಎಂದು ವ್ಯಾವಹಾರಿಕವಾಗಿ ಕಂಡುಬಂದರೂ ಮೂಲತಃ ಅವರೆಲ್ಲ ವೈಯಕ್ತಿಕವಾಗಿ ಬ್ರಾಹ್ಮಣರು ಎಂಬುದನ್ನು ಮರೆಯುವಂತಿಲ್ಲ. ಮುಖ್ಯವಾಗಿ ಲೌಕಿಕ ರಂಗದಲ್ಲಿ ದುಡಿಯುವ ಬ್ರಾಹ್ಮಣರಿಗೆ ತಾವು ಜನ್ಮತಃ ಮತ್ತು ಪರಂಪರೆಯಲ್ಲಿ ಯಾರು ಎಂಬ ಅರಿವು ಅಭಿಮಾನಗಳು ಸಾಕಷ್ಟು ಇಲ್ಲದಿರುವುದೇ ಇಂದಿನ ಬ್ರಾಹ್ಮಣ ಸಮಾಜ ಅಭ್ಯುದಯದ ಕುರಿತಾದ ಅನೇಕ ಅಡ್ಡಿ ಆತಂಕಗಳಿಗೆ ಕಾರಣವಾಗಿರುತ್ತದೆ.

ಬ್ರಾಹ್ಮಣರಿಂದು ಯಾವುದೇ ರೀತಿಯ ಕೃಷಿ, ವಾಣಿಜ್ಯ, ಕೈಗಾರಿಕೆ, ಆಡಳಿತ ಇತ್ಯಾದಿಯಾದ ಉದ್ಯೋಗದಲ್ಲಿ ನಿರತರಾಗಿದ್ದರೂ ದುಡಿಮೆಯ ಅವಧಿ ದಿನದ ಇಪ್ಪತ್ತನಾಲ್ಕು ಘಂಟೆಗಳಲ್ಲಿ ಹತ್ತು ಗಂಟೆಗಿಂತ ಅಧಿಕವಾಗಲಾರದು. ಉಳಿದ ಕಾಲದಲ್ಲಿ ನಿಶ್ಚಿತವಾಗಿ ಸ್ವಲ್ಪಭಾಗವನ್ನೂ ಸಹ ತಮ್ಮ ಪರಂಪರೆಯ ವಿದ್ಯೆಗಾಗಿ ಮತ್ತು ಕರ್ಮಾನುಷ್ಠಾನಕ್ಕಾಗಿ ಬಳಸಿಕೊಳ್ಳದಿರುವುದೇ ಬ್ರಾಹ್ಮಣರಲ್ಲಿ ಬ್ರಹ್ಮತೇಜೋ ದಾರಿದ್ರ್ಯ ಕಾರಣವೆಂದೂ ದೇಶ ಕಾಲ ಪರಿಸ್ಥಿತಿ ಇದಕ್ಕೆ ಕಾರಣವಲ್ಲವೆಂದೂ ಈ ಕುರಿತು ಆಳವಾಗಿ ವಿಚಾರ ಮಾಡಿದಾಗ ಸ್ಪಷ್ಟವಾಗುತ್ತದೆ.

ಬ್ರಾಹ್ಮಣ ಎನ್ನುವುದನ್ನು ಉಳಿಸುವುದೆಂದರೆ, ಅದನ್ನು ಜೀವನದಲ್ಲಿ ಅನುಷ್ಠಾನದ ಮೂಲಕ ವಿಕಾಸಗೊಳಿಸಿ ಪ್ರಕಾಶಪಡಿಸುವುದಾಗಿದೆ. ಅನುಷ್ಠಾನಕ್ಕೆ ಈ ಕಾಲದಲ್ಲಿ ಅವಕಾಶವಿಲ್ಲ, ಪರಿಸ್ಥಿತಿ ಸರಿ ಇಲ್ಲ, ಎನ್ನುವವರಿಗಾಗಿಯೋ ಎಂಬಂತೆ ತಮ್ಮ ಸನಾತನ ಧರ್ಮ ಶಾಸ್ತ್ರವು ಧರ್ಮವನ್ನು ಸ್ವಲ್ಪವಾದರೂ ಅನುಷ್ಠಾನ ಮಾಡಬೇಕು. ಎನ್ನುತ್ತಾ ''ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'' – (ಶ್ರೀ ಮದ್ಭಗವದ್ಗೀತಾ) ಅಂದರೆ– ಸ್ವಲ್ಪವಾದ ಅನುಷ್ಠಾನವೂ

ಕೂಡ ಅನುಷ್ಠಾನ ಮಾಡುವವರನ್ನು ಮಹಾ ಭಯದಿಂದ ಕಾಪಾಡುತ್ತದೆ ಎಂಬುದಾಗಿ ಭರವಸೆಯನ್ನು ನೀಡಿರುತ್ತದೆ.

ಇಂದು ಬ್ರಾಹ್ಮಣ ಕರ್ಮಗಳನ್ನು ವೇದಾದಿ ಶಾಸ್ತ್ರದಂತೆ ಅಧ್ಯಯನ, ಅಧ್ಯಾಪನೆ, ಯಜನ–ಯಾಜನ ಎಂಬಿತ್ಯಾದಿ ಷಟ್ಕರ್ಮಗಳನ್ನು ಮಾಡುತ್ತಾ ಬ್ರಾಹ್ಮಣರೆಲ್ಲರೂ ಬಾಳುವ ಸ್ಥಿತಿ ಸಮಾಜದಲ್ಲಿ ಇಲ್ಲ. ಹಾಗೆಂದು ಬ್ರಾಹ್ಮಣರು ಅಧೀರರಾಗಬೇಕಾಗಿಲ್ಲ. ಈ ಆರು ಅಂಶಗಳಲ್ಲಿ ಸಾಧ್ಯವಾದಷ್ಟು ಅಂಶಗಳನ್ನು ಆಧರಿಸಿದಂತಹ ಜೀವನ ಮಾರ್ಗವನ್ನು ಆರಿಸಿಕೊಳ್ಳಬಹುದು. ಅದಾಗದೇ ಇದ್ದಾಗ ತನಗೆ ಜೀವನದಲ್ಲಿ ಕೂಡಿ ಬಂದ ಕೃಷಿ, ವ್ಯಾಪಾರ, ಸರಕಾರಿ ನೌಕರಿ, ಇತ್ಯಾದಿ ಯಾವುದೇ ವೃತ್ತಿಯನ್ನು ಗುರುದೇವತಾ ಭಕ್ತಿಸಂಪನ್ನನಾಗಿ ಭಗವಂತನ ಕೆಲಸ ಎಂಬ ಸಮರ್ಪಣ ಭಾವದಿಂದ ನಿರ್ವಹಿಸಿ ಕೃತಾರ್ಥರಾಗಬಹುದು. ಈ ಯಾವುದೇ ಕ್ಷೇತ್ರದಲ್ಲಿ ದುಡಿಯಲು ಬ್ರಾಹ್ಮಣನಿಗೆ ಅವನ ನಿತ್ಯದ ಸಂಧ್ಯೋಪಾಸನೆ, ಗುರುದೇವತಾರಾಧನೆ, ವೇದೋಪನಿಷತ್ತು, ಶ್ರೀ ಮದ್ಭಗವದ್ಗೀತಾದಿ ಸದ್ಗ್ರಂಥಗಳ ಪಠಣ–ಮನನ, ಆಹಾರ ವಿಹಾರದಲ್ಲಿ ನೀತಿಪಾಲನೆ ಇವುಗಳು ಉತ್ಸಾಹ–ಶಕ್ತಿಗಳನ್ನು ಉಂಟುಮಾಡುತ್ತವೆ. ಅಲ್ಲದೆ ತನ್ಮೂಲಕ ಶ್ರೇಯಸ್ಸುಂಟಾಗುತ್ತದೆ ಎಂಬುದು ಸನಾತನ ಹಿಂದೂ ಧರ್ಮದ ಆಶ್ವಾಸನೆ ಹಾಗೂ ಸಂದೇಶವಾಗಿರುತ್ತದೆ. ಬ್ರಾಹ್ಮಣರಲ್ಲಿ ಆಚಾರ್ಯರಾಗಿ, ಗುರುಗಳಾಗಿ, ವೈದಿಕರಾಗಿ ಪರಿಶುದ್ಧವೂ, ಸಮರ್ಥವೂ ಆದ ಜೀವನವನ್ನು ನಡೆಸಿ ಬ್ರಾಹ್ಮಣ್ಯವನ್ನು ಉಳಿಸಿ ಬೆಳಗಿಸಿದ ಅನೇಕ ಮಂದಿ ಗಣ್ಯರು ಆಸೇತು ಹಿಮಾಚಲಪರ್ಯಂತ ಇತ್ತೀಚೆಗಿನ ಶತಮಾನಗಳಲ್ಲಿ ಬಾಳಿ ಬೆಳಗಿರುವ ಬಗೆಗೆ ಇತಿಹಾಸದಲ್ಲಿ ದಾಖಲೆಗಳಿವೆ. ಹಾಗೆಯೇ ಬ್ರಾಹ್ಮಣರಲ್ಲಿ ರಾಜಕಾರಣಿಗಳು, ಶಿಕ್ಷಣತಜ್ಞರು, ನ್ಯಾಯವಾದಿಗಳು, ಆಡಳಿತಾಧಿಕಾರಿಗಳು, ವಾಣಿಜ್ಯೋದ್ಯಮಿಗಳು ಎಂಬುದಾಗಿ ಲೌಕಿಕರಂಗದಲ್ಲಿ ಬಾಳುತ್ತಾ ನಿತ್ಯ ಸಂಧ್ಯೋಪಾಸನೆ, ಶ್ರೀ ಗುರು ದೇವತಾರಾಧನೆ, ಸ್ವಾಧ್ಯಾಯ, ಸತ್ಸಂಗಗಳಿಂದ ಕೂಡಿ ಸದ್ಗುಣ–ಸದಾಚಾರವಂತರಾಗಿ ಬ್ರಾಹ್ಮಣ್ಯವನ್ನು ಬಳಸಿ ಪೋಷಿಸುತ್ತಾ ಬಾಳಿ ಬೆಳಗಿದ ಅದೆಷ್ಟೋ ಮಂದಿ ಮಹನೀಯರ ಕುರಿತು ಮನೋಜ್ಞ ಚಿತ್ರಣಗಳು ನಮ್ಮ ದೇಶದ ಚರಿತ್ರೆಯ ಪುಟಗಳಲ್ಲಿ ಸುಂದರವಾಗಿ ಕಂಗೊಳಿಸುತ್ತಿವೆ.

ಬ್ರಾಹ್ಮಣ್ಯದ ಮಹತ್ವವು ಬ್ರಹ್ಮಶಕ್ತಿಪ್ರಕಾಶದಲ್ಲಿದ್ದು ಬ್ರಹ್ಮ ಶಕ್ತಿ ಪ್ರಕಾಶ

ಸಾಧ್ಯತೆಯು ಮೂಲವಾಗಿ ಸಂಧ್ಯೋಪಾಸನೆಯಲ್ಲಿ ಅಡಗಿದೆ. ಸಂಧ್ಯೋಪಾಸನೆಯ ಮಹತ್ವವು ಗಾಯತ್ರಿ ಮಂತ್ರದ ಜಪಾನುಷ್ಠಾನದಲ್ಲಿ ಸೇರಿರುತ್ತದೆ. ಆದುದರಿಂದಲೇ ಬ್ರಾಹ್ಮಣನಿಗೆ ಸಂಧ್ಯಾ ಗಾಯತ್ರಿಗಿಂತ ಮಿಗಿಲಾದ ದೇವರಿಲ್ಲ ಎಂಬುದಾಗಿ ಶಾಸ್ತ್ರದಲ್ಲಿ ಹೀಗೆ ಹೇಳಲಾಗಿದೆ :–

'ಸಂಧ್ಯಾಯಾ ಅಪರಂ ದೈವಂ ಬ್ರಾಹ್ಮಣಸ್ಯ ನ ವಿದ್ಯತೇ'

– ದೇವೀ ಭಾಗವತ

'ಅಹರಹಃ ಸಂಧ್ಯಾಮುಪಾಸೀತ'

– ಸಂಧ್ಯಾವಂದನೆಯನ್ನು ನಿತ್ಯವೂ ಮಾಡಬೇಕು

(ಛಾಂದೋಗ್ಯ ಉಪನಿಷತ್ತು)

ಶಾಸ್ತ್ರೋಕ್ತವಾದ ಹೆಚ್ಚಿನ ಯಾವ ಕರ್ಮಾನುಷ್ಠಾನವನ್ನು ಮಾಡದಿದ್ದರೂ ವಿದ್ಯಾವಂತನು ಅಲ್ಲದಿದ್ದರೂ ಯಾವ ದ್ವಿಜನು ಸಂಧ್ಯೋಪಾಸನೆಯನ್ನು ತಪ್ಪದೇ ಮಾಡುತ್ತಿರುತ್ತಾನೆ ಅವನು ಸಾಕ್ಷಾತ್ ಬ್ರಾಹ್ಮಣನೇ ಸರಿ ಎಂಬುದಾಗಿ ಆಶ್ವಲಾಯನ ಸ್ಮೃತಿ ರತ್ನದಲ್ಲಿ ಹೇಳಲಾಗಿದ್ದು ಬ್ರಾಹ್ಮಣನ ಜೀವನದಲ್ಲಿ ಸಂಧ್ಯಾವಂದನೆಯ ಮಹತ್ವ ಹಾಗೂ ಬ್ರಾಹ್ಮಣ್ಯದ ರಕ್ಷಣೆಯ ಮೂಲ ಸೂತ್ರವನ್ನು ಅದರಲ್ಲಿ ಹೀಗೆ ಸ್ಪಷ್ಟಪಡಿಸಲಾಗಿದೆ :–

ಸರ್ವಕರ್ಮವಿಹೀನೋಽಪಿ ವಿದ್ಯಾಹೀನಶ್ಚ ಯೋ ದ್ವಿಜಃ ।
ಸಂಧ್ಯಯೋಸ್ತತ್ಪರಶ್ಚೇತ್ಸ್ಯಾತ್ ಸ ಸಾಕ್ಷಾದ್ಬ್ರಹ್ಮಣಾ ಸಮಃ ॥

ಬ್ರಾಹ್ಮಣ್ಯದ ಮಹತ್ವ ಹಾಗೂ ರಕ್ಷಣೆ ವಿಚಾರದಲ್ಲಿ ಸಂಧ್ಯೋಪಾಸನೆಗೆ ಮಹತ್ವಪೂರ್ಣವಾದ ಸ್ಥಾನವನ್ನು ಪ್ರಾಚೀನ ಕಾಲದಿಂದಲೂ ನೀಡುತ್ತಾ ಬರಲಾಗಿದೆ. ಈ ಸಂಬಂಧವಾಗಿ ಮಹಾಭಾರತದಲ್ಲಿ ಬರುವ ಶ್ಲೋಕವೊಂದು– ''ಋಷಯೋ ದೀರ್ಘಸಂಧ್ಯತ್ವಾದ್ದೀರ್ಘಮಾಯುರವಾಪ್ನುಯುಃ । ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ॥'' ಅಂದರೆ – ಮಹರ್ಷಿಗಳು ಹೆಚ್ಚು ಸಮಯ ಸಂಧ್ಯಾವಂದನೆ, ಗಾಯತ್ರಿ ಜಪಗಳನ್ನು ಮಾಡಿದ್ದರಿಂದಾಗಿ ದೀರ್ಘಾಯುಷ್ಯ, ಬುದ್ಧಿಯ ಚುರುಕುತನ, ಯಶಸ್ಸು, ಕೀರ್ತಿ ಮತ್ತು ಬ್ರಹ್ಮ ತೇಜಸ್ಸನ್ನು ಹೊಂದಿದ್ದರು ಎಂಬುದಾಗಿ ಸಾರಿ ಹೇಳುತ್ತದೆ.

ಶ್ರೀ ಶಂಕರಭಗವತ್ಪಾದಾಚಾರ್ಯರು ಸಹಸ್ರ ಸಂವತ್ಸರಗಳಿಗೂ ಪೂರ್ವದಲ್ಲಿ ರಚಿಸಿದ ಶ್ರೀ ಮದ್ಭಗವದ್ಗೀತಾ ಭಾಷ್ಯದಲ್ಲಿ ಬ್ರಾಹ್ಮಣ್ಯ ರಕ್ಷಣೆಯ ಅವಶ್ಯಕತೆಯನ್ನು ಹೀಗೆ ಹೇಳಿದ್ದಾರೆ.

ಬ್ರಾಹ್ಮಣತ್ವಸ್ಯ ಹಿ ರಕ್ಷಣೇನ ರಕ್ಷಿತಃ ಸ್ಯಾತ್ ವೈದಿಕೋ ಧರ್ಮಃ ।
ತದಧೀನತ್ವಾತ್ ವರ್ಣಾಶ್ರಮ ಭೇದಾನಾಮ್

ಬ್ರಾಹ್ಮಣ್ಯವನ್ನು ರಕ್ಷಿಸಿ ಉಳಿಸಿಕೊಂಡರೆ ಮಾತ್ರ ವೈದಿಕ ಧರ್ಮದ ರಕ್ಷಣೆಯಾಗುತ್ತದೆ. ಏಕೆಂದರೆ ವರ್ಣಾಶ್ರಮ ಭೇದಗಳು ವೈದಿಕ ಧರ್ಮಕ್ಕೆ ಅಧೀನವಾಗಿರುತ್ತವೆ.

ಸಮಾಜದಲ್ಲಿ ದೈವೀ ಸಂಪತ್ತು ಹಾಗೂ ಅಸುರೀ ಸಂಪತ್ತು ಎಲ್ಲಾ ಕಾಲದಲ್ಲೂ ಇದ್ದೇ ಇರುತ್ತದೆ. ಹಾಗೆಯೇ ಅವುಗಳ ಒಳಗೆ ಪರಸ್ಪರ ಹೋರಾಟವು ನಡೆಯುತ್ತಲೇ ಇರುತ್ತದೆ ಎಂದಿದ್ದರೂ ದೈವೀ ಸಂಪತ್ತಿಗೇ ಜಯ ಎನ್ನುವುದು ಎಷ್ಟು ಸತ್ಯವೋ ಹಾಗೆಯೇ ಸಮಾಜದಲ್ಲಿ ದೈವೀ ಸಂಪತ್ತು ಕ್ಷಯವಾಗದಂತೆ ಆಯಾ ಪೀಳಿಗೆಯಲ್ಲಿ ಕಾಯ್ದುಕೊಳ್ಳುವ ಅಗತ್ಯವಿದೆ ಎನ್ನುವುದೂ ಅಷ್ಟೇ ಸತ್ಯ. ಈ ದೃಷ್ಟಿಯಿಂದ ದೈವೀ ಸಂಪತ್ತಿನ ವಿಶೇಷ ಪ್ರಕಾಶದ ನೆಲೆಯಾದ ಬ್ರಾಹ್ಮಣರು–ಬ್ರಾಹ್ಮಣ್ಯದ ರಕ್ಷಣೆ ಹಾಗೂ ಪೋಷಣೆಯು ಯಾವಾಗಲೂ ಅವಶ್ಯವಿದೆ. ಹಾಗಾಗಿ, ಬ್ರಾಹ್ಮಣರಿಗೆ ಬ್ರಾಹ್ಮಣ್ಯದ ಮಹತ್ವದ ಅರಿವು–ಅಭಿಮಾನ ಹಾಗೂ ಪರಿಪಾಲನೆಗಳು ಎಂದೆಂದಿಗೂ ಅಗತ್ಯವಷ್ಟೇ ಅಲ್ಲ, ದೈವದತ್ತವಾದ ಕರ್ತವ್ಯವೂ ಆಗಿರುತ್ತದೆ.

***

# ಸಮಸ್ತ ಬ್ರಾಹ್ಮಣರೂ- ಎಲ್ಲ ಭಾರತೀಯರೂ - ಅವಶ್ಯವಾಗಿ ತಿಳಿದಿರಬೇಕಾದ ವಿಷಯಗಳು

1. ಅತ್ರಾಪಿ ಭಾರತಂ ಶ್ರೇಷ್ಠಂ ಜಂಬೂದ್ವೀಪೇ ಮಹಾಮುನೇ ।
ಯತೋ ಹಿ ಕರ್ಮಭೂರೇಷಾ ಹ್ಯತೋಽಭೋಗಭೂಮಯಃ ।

ಎಂದು ಪರಾಶರರು ಹೇಳುತ್ತಾರೆ. ''ಮಹರ್ಷಿ– ಮೈತ್ರೇಯ, ಈ ಜಂಬೂ ದ್ವೀಪದಲ್ಲಿ ಭರತ ಖಂಡವು ಶ್ರೇಷ್ಠವಾದದ್ದು, ಏಕೆಂದರೆ ಇದು ಕರ್ಮ ಭೂಮಿ ಎನಿಸಿದೆ. ಉಳಿದ ರಾಷ್ಟ್ರಗಳೆಲ್ಲವೂ ಭೋಗ ಭೂಮಿಗಳು.''

2. ಅತ್ರ ಜನ್ಮ ಸಹಸ್ರಾಣಾಂ ಸಹಸ್ರೈರಪಿ ಸತ್ತಮ ।
ಕದಾಚಿಲ್ಲಭತೇ ಜಂತುರ್ಮಾನುಷ್ಯಂ ಪುಣ್ಯ ಸಂಚಯಾತ್ ॥

''ಸತ್ಪುರುಷ ಮೈತ್ರೇಯ, ಈ ಭರತಖಂಡದಲ್ಲಿ ಮನುಷ್ಯ ಜನ್ಮ ಬರಬೇಕಾದರೆ ಎಷ್ಟೋ ಸಾವಿರಾರು ವರ್ಷಗಳಲ್ಲಿ ಮಾಡಿದ ಪುಣ್ಯ ಸಂಗ್ರಹವಿರಬೇಕು.

– ವಿಷ್ಣುಪುರಾಣ, ಅಂಶ–2, ಅಧ್ಯಾಯ–3

ಇಂತಹ ಪುಣ್ಯಭೂಮಿಯಾದ ಭಾರತ ದೇಶದಲ್ಲಿ ಜನ್ಮವೆತ್ತತಕ್ಕವರು ಧನ್ಯರೆಂದೂ ನಮಗೂ ಸಹ ಈ ದೇಶದಲ್ಲಿ ಜನ್ಮವಾಗಲೆಂದೂ ದೇವತೆಗಳು ಸಹ ಬಯಸುತ್ತಾರೆಂದು ವಿಷ್ಣುಪುರಾಣದಲ್ಲಿ ಹೇಳಿದೆ. ಕರ್ಮಭೂಮಿಯೆಂದರೆ ವೇದೋಕ್ತವಾದ ಕರ್ಮಗಳನ್ನು ಆಚರಿಸಲು ಯೋಗ್ಯವಾದ ದೇಶ. ಅದರಲ್ಲಿಯೂ ಬ್ರಾಹ್ಮಣ ಜನ್ಮವು ದುರ್ಲಭವೆಂದೂ ಪುಣ್ಯಬಲದಿಂದಲೇ ಇದು ಲಭಿಸುತ್ತದೆಯೆಂದೂ ನಮ್ಮ ಎಲ್ಲ ಗ್ರಂಥಗಳು ಸಾರುತ್ತವೆ.

ಭಾರತೀಯರಿಗೆ ವೇದಗಳು ಆಧಾರ ಗ್ರಂಥಗಳು. ಅತ್ಯಂತ ಪವಿತ್ರವಾದವು. ಇವು ಸಾಕ್ಷಾತ್ ಭಗವಂತನ ಮುಖದಿಂದಲೇ ಹೊರಬಂದವೆಂದೂ ಪ್ರಯತ್ನಪೂರ್ವಕವಾಗಿ ಯಾರೂ ಇವನ್ನು ರಚಿಸಲಿಲ್ಲವೆಂದೂ ಹೇಳಿದ್ದಾರೆ. ಆದ್ದರಿಂದ ವೇದಗಳು ಅಪೌರುಷೇಯಗಳೆನ್ನುತ್ತಾರೆ. ಅಪೌರುಷೇಯವೆಂದರೆ ಪುರುಷನಿರ್ಮಿತವಲ್ಲವೆಂದರ್ಥ. ಧರ್ಮಶಾಸ್ತ್ರ ಮೊದಲಾದವೆಲ್ಲವೂ ವೇದಮೂಲಕವಾಗಿ ಬಂದವು. ಅವನ್ನು ಋಷಿಗಳು ರಚಿಸಿದ್ದಾರೆ.

ಋಗ್ವೇದ, ಯಜುರ್ವೇದ , ಸಾಮವೇದ, ಅಥರ್ವಣವೇದ ಎಂದು ವೇದಗಳು ನಾಲ್ಕು. ಪರಂಪರೆಯಿಂದ ಋಗ್ವೇದವನ್ನು ಅಧ್ಯಯನ ಮಾಡುತ್ತ ಬಂದವರು ಋಗ್ವೇದಿಗಳೆನ್ನಿಸುತ್ತಾರೆ. ಹೀಗೆಯೇ ಯಜುರ್ವೇದಿ, ಸಾಮವೇದಿ, ಅಥರ್ವಣವೇದಿ ಎಂದು ತಿಳಿಯಬೇಕು. ಯಜುರ್ವೇದದಲ್ಲಿ ಶುಕ್ಲಯಜುರ್ವೇದ, ಕೃಷ್ಣಯಜುರ್ವೇದ ಎಂದು ಎರಡು ಶಾಖೆಗಳಿವೆ. ಹವ್ಯಕರು ಕೃಷ್ಣ ಯಜುರ್ವೇದಿಗಳು. ಇವರಲ್ಲಿ ಕೆಲವರು ಸಾಮವೇದಿಗಳು. ಹವ್ಯಕರಲ್ಲಿ ಶುಕ್ಲಯಜುರ್ವೇದಿಗಳಿಲ್ಲ. ಅಥರ್ವಣವೇದಿಗಳೂ ಕಂಡುಬರುವುದಿಲ್ಲ.

ಕೃಷ್ಣಯಜುರ್ವೇದದಲ್ಲಿ ಬೋಧಾಯನ, ಆಪಸ್ತಂಬ–ಎಂಬ ಇಬ್ಬರು ಋಷಿಗಳು ಬರೆದ ಧರ್ಮಸೂತ್ರ, ಗೃಹ್ಯ ಸೂತ್ರಗಳಿವೆ. ಯಜುರ್ವೇದಿಗಳಾದ ಹವ್ಯಕರೆಲ್ಲರೂ ಬೋಧಾಯನಸೂತ್ರದವರು. ಸಾಮವೇದಿಗಳು...... ಅವಲಂಬಿಸಿರುತ್ತಾರೆ. ಹವ್ಯಕರೆಲ್ಲರೂ ಸ್ಮಾರ್ತರು. ಸ್ಮಾರ್ತರೆಂದರೆ ಅದ್ವೈತ ಸಿದ್ಧಾಂತವನ್ನು ನಂಬಿದವರೆಂದು ತಿಳಿಯಬೇಕು. ಶ್ರೀ ಶಂಕರಾಚಾರ್ಯರು ನಮಗೆ ಆದಿ ಗುರುಗಳ ಉಪನಿಷತ್ತುಗಳು ವೇದದ ಒಂದು ಭಾಗ. ಒಟ್ಟು 108 ಉಪನಿಷತ್ತುಗಳಿವೆ. ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮೂಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ– ಎಂಬ ಹತ್ತು ಉಪನಿಷತ್ತುಗಳು ಪ್ರಸಿದ್ಧವಾದವು. ಇವುಗಳಿಗೆ ದಶೋಪನಿಷತ್ತುಗಳೆನ್ನುತ್ತಾರೆ. ಉಪನಿಷತ್ತಿಗೇ ವೇದಾಂತವೆಂದು ಹೆಸರಿದೆ.

ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ–ಈ ಮೂರಕ್ಕೆ ಪ್ರಸ್ಥಾನತ್ರಯ ಎನ್ನುತ್ತಾರೆ. ಶ್ರೀ ಶಂಕರಾಚಾರ್ಯರು ಪ್ರಸ್ಥಾನತ್ರಯಗಳಿಗೂ ವಿಸ್ತಾರವಾದ ಭಾಷ್ಯವನ್ನು ರಚಿಸಿ ಅದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ. ಸ್ಮಾರ್ತರು ಒಪ್ಪಿರುವ ವೇದಾಂತವೆಂದರೆ ಇದೇ. ವೇದಾಂತದರ್ಶನವನ್ನು ಉತ್ತರ ಮೀಮಾಂಸೆಯೆಂದೂ ಕರೆಯುತ್ತಾರೆ.

ನಮ್ಮಲ್ಲಿ ಹದಿನೆಂಟು ಮಹಾ ಪುರಾಣಗಳೂ, ಹದಿನೆಂಟು ಸ್ಮೃತಿಗಳೂ ಇವೆ. ಪುರಾಣಗಳಲ್ಲಿ ವಿಷ್ಣುಪುರಾಣ, ಸ್ಕಂದ ಪುರಾಣ, ಶಿವ ಪುರಾಣ, ಭಾಗವತಪುರಾಣ, ಗರುಡ ಪುರಾಣ–ಇವು ಹೆಚ್ಚು ಬಳಕೆಯಲ್ಲಿರತಕ್ಕವು. ಭಾಗವತಪುರಾಣದಲ್ಲಿ ಶ್ರೀಮದ್ಭಾಗವತ, ದೇವೀಭಾಗವತ ಎಂಬ ಎರಡು ಪುರಾಣಗಳುಂಟು. ಎರಡೂ

ನಮಗೆ ಪೂಜ್ಯವಾದವು. ಸ್ಮೃತಿಗಳಲ್ಲಿ ಮನು ಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಪರಾಶರ ಸ್ಮೃತಿಗಳು ಪ್ರಸಿದ್ಧವಾದವು. ವಾಲ್ಮೀಕಿ ಮುನಿಗಳ ಶ್ರೀಮದ್ರಾಮಾಯಣ, ವ್ಯಾಸರ ಮಹಾಭಾರತ–ಇವೆರಡನ್ನು ಇತಿಹಾಸಗಳೆಂದು ಕರೆದಿದ್ದಾರೆ.

ಹೊಸನಗರ ತಾಲ್ಲೂಕಿನಲ್ಲಿರುವ ಶ್ರೀಮದ್ರಾಮಚಂದ್ರಾಪುರಮಠವು ಹವ್ಯಕರ ಮುಖ್ಯವಾದ ಮಠ. ಶಿರಸಿ ತಾಲ್ಲೂಕಿನಲ್ಲಿರುವ ಶ್ರೀ ಸ್ವರ್ಣವಲ್ಲೀ ಮಠಕ್ಕೂ ಬಹುಮಂದಿ ಹವ್ಯಕ ಶಿಷ್ಯರಿದ್ದಾರೆ. ಈ ಎರಡು ಮಠಗಳೂ ಹವ್ಯಕರಿಗೆ ಪೂಜ್ಯಮಠಗಳು.

### ಗೋತ್ರ ಪ್ರವರ ವಿಚಾರ

ಗೋತ್ರವೆಂದರೆ ವಂಶವೆಂದೂ ವಂಶದಲ್ಲಿ ಹುಟ್ಟಿದವನೆಂದೂ ಸಾಮಾನವಾದ ಅರ್ಥ. ವಸಿಷ್ಠ, ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ಕಶ್ಯಪ, ಅಗಸ್ತ್ಯ– ಈ ಎಂಟು ಮಂದಿ ಋಷಿಗಳು ಗೋತ್ರ ಪ್ರವರ್ತಕರು. ಕೌಂಡಿನ್ಯ, ಅಂಗಿರಸ, ಅಶ್ವಲಾಯನ– ಮುಂತಾದ ಇನ್ನೂ ಕೆಲವು ಋಷಿಗಳು ಗೋತ್ರ ಪ್ರವರ್ತಕರೆಂದು ಶಾಸ್ತ್ರಕಾರರು ಹೇಳಿದ್ದಾರೆ. ವಸಿಷ್ಠ ಗೋತ್ರೋತ್ಪನ್ನ – ಎಂದರೆ ವಸಿಷ್ಠಮುನಿಗಳ ವಂಶದಲ್ಲಿ ಹುಟ್ಟಿದವ ನೆಂದರ್ಥ. ಪ್ರತಿಯೊಂದು ಗೋತ್ರಕ್ಕೂ ಪ್ರವರರ್ಷಿಗಳಿರುತ್ತಾರೆ. ಪ್ರವರರ್ಷಿಗಳ ಸಂಖ್ಯೆ ಒಂದು, ಎರಡು, ಮೂರು, ಅಥವಾ ಐದು ಇರುತ್ತದೆ. ತಮ್ಮ ತಮ್ಮ ಹಿರಿಯರಿಂದ ಗೋತ್ರವನ್ನು ಪ್ರವರವನ್ನು ತಿಳಿದುಕೊಳ್ಳಬೇಕು.

### ಅಭಿವಾದನೆ

ಉಪನಯನವಾದವನು ಗುರುಹಿರಿಯರಿಗೆ ಅಭಿವಾದನ ಮಾಡಬೇಕಾದದ್ದು ಸರಿಯಾದ ಕ್ರಮ. ಸಂಧ್ಯಾವಂದನಾದಿ ಕರ್ಮಗಳಲ್ಲಿಯೂ ಅಭಿವಾದನೆ ಬರುತ್ತದೆ. ತನ್ನ ವೇದ ಶಾಖೆ, ಗೋತ್ರ ಪ್ರವರಾದಿಗಳನ್ನು ಹೇಳಿ, ಗುರುವಿನ ಎರಡು ಪಾದಾಂಗಷ್ಠಗಳನ್ನು ಮುಟ್ಟಿ ನಮಸ್ಕರಿಸುವುದು ಅಭಿವಾದನೆ. ತನ್ನ ಬಲಗೈಯಿಂದ ಎದುರಿಗಿರುವವರ ಬಲಗಾಲಿನ ಅಂಗುಷ್ಠವನ್ನು ಎಡಗೈಯಿಂದ ಎಡಗಾಲಿನ ಅಂಗುಷ್ಠವನ್ನು ಸ್ಪರ್ಶಿಸಬೇಕು. ಆಗ ಅಭಿವಾದನ ಮಾಡತಕ್ಕವನ ಎರಡು ಕೈಗಳು ಈ (x) ಆಕಾರವನ್ನು ತಳೆಯುತ್ತದೆ. ಅಭಿವಾದನವಚಕ್ಕೆ ಉದಾಹರಣೆ : ''ವೈಶ್ವಾಮಿತ್ರ- ದೇವರಾತ- ಔದಲೇತಿತ್ರ್ಯಾರ್ಷೇಯಪ್ರವರಾನ್ವಿತವಿಶ್ವಾಮಿತ್ರ

ಗೋತ್ರೋತ್ಪನ್ನಃ ಯಜುಃಶಾಖಾ ಧಾಯೀ ದೇವದತ್ತಶರ್ಮಾ ಅಹಮಸ್ಮಿ ಅಹಂ ಭೋ ಅಭಿವಾದಯೇ''

ನೆನಪಿನಲ್ಲಿಟ್ಟುಕೊಂಡಿರಬೇಕಾದ ವಿಷಯ:

1. ತನ್ನ ವೇದ ಶಾಖೆ ಮತ್ತು ಸೂತ್ರ
2. ಗೋತ್ರ ಪ್ರವರ
3. ಕುಲದೇವತೆ, ಗುರುಪೀಠ
4. ತಂದೆ– ತಾಯಿ, ಅಜ್ಜ– ಅಜ್ಜಿ, ಮುತ್ತಜ್ಜ– ಮುತ್ತಜ್ಜಿ ಇವರ ಹೆಸರುಗಳು. ಹಾಗೆಯೇ ಮಾತೃವರ್ಗದಲ್ಲಿ ಅಜ್ಜ– ಅಜ್ಜಿ ಮುತ್ತಜ್ಜ– ಮುತ್ತಜ್ಜಿ ಇವರ ಹೆಸರುಗಳು ಮತ್ತು ಮಾತೃವರ್ಗದ ಗೋತ್ರ.
5. ತಂದೆ– ತಾಯಿಗಳು ಮೃತರಾಗಿದ್ದರೆ ಮರಣವಾದ ತಿಂಗಳು, ಪಕ್ಷ ಮತ್ತು ತಿಥಿ.

ಪ್ರತಿಯೊಬ್ಬ ಬ್ರಾಹ್ಮಣರ ಮನೆಯಲ್ಲಿ ಆವಶ್ಯವಾಗಿ ಇರಬೇಕಾದ ವಸ್ತುಗಳು

1. ಇಷ್ಟವಾದ ಒಂದು ದೇವರ ಪಟ,ಕುಲದೇವತೆಯ ಪಟ, ಮಠಾಧಿಪತಿಗಳ ಪಟ.
2. ಶ್ರೀ ಶಂಕರಾಚಾರ್ಯರ ಪಟ.
3. ಉಡುವ ಮತ್ತು ಹೊದೆಯುವ ಮಡಿ.
4. ಹರಿವಾಣ ತಂಬಿಗೆ, ಪಂಚಪಾತ್ರೆ, ಉದ್ಧರಣೆ, ಘಂಟೆ, ಆರತಿ, ದೀಪ ಹಚ್ಚುವ ಗಿಣಗಲು.
5. ಭಸ್ಮ (ವಿಭೂತಿ) ಅರಿಸಿಣ, ಕುಂಕುಮ, ರಂಗವಲ್ಲಿ ಧೂಪದ ಕಡ್ಡಿ, ಬತ್ತಿ ಕರ್ಪೂರ.
6. ಭಗವದ್ಗೀತೆಯ ಒಂದು ಪುಸ್ತಕ, ವಿಷ್ಣು ಸಹಸ್ರನಾಮದ ಪುಸ್ತಕ,

ಆಯಾವರ್ಷದ ಪಂಚಾಂಗ.

7. ದರ್ಭೆ, ಕರಿಯ ಎಳ್ಳು

8. ಮರದ ಮಣೆ, ಚಿಕ್ಕ ಚಾಪೆಗಳು.

9. ಬಿಡಿ ಜನಿವಾರಗಳು.

10. ಗಂಗಾಜಲವನ್ನು ತುಂಬಿದ ಕಲಶ

11. ಶಂಖ, ಜಾಗಟೆ, ತಾಳ.

***

# ಉಪಯುಕ್ತ ಜ್ಯೋತಿಷವಿಷಯಗಳು

ಸಂವತ್ಸರಗಳು

| | | |
|---|---|---|
| 1. ಪ್ರಭವ | 21. ಸರ್ವಜಿತು | 41 ಪ್ಲವಂಗ |
| 2. ವಿಭವ | 22. ಸರ್ವಧಾರಿ | 42. ಕೀಲಕ |
| 3. ಶುಕ್ಲ | 23. ವಿರೋಧಿ | 43. ಸೌಮ್ಯ |
| 4. ಪ್ರಮೋದ | 24. ವಿಕೃತಿ | 44. ಸಾಧಾರಣ |
| 5. ಪ್ರಜೋತ್ಪತ್ತಿ | 25. ಖರ | 45. ವಿರೋಧಿಕೃತ್ |
| 6. ಅಂಗಿರಸ | 26. ನಂದನ | 46. ಪರದಾವಿ |
| 7. ಶ್ರೀಮುಖ | 27 ವಿಜಯ | 47. ಪ್ರಮಾದೀಚ |
| 8. ಭಾವ | 28. ಜಯ | 48. ಆನಂದ. |
| 9. ಯುವ | 29. ಮನ್ಮಥ | 49. ರಾಕ್ಷಸ |
| 10. ಧಾತು | 30. ದುರ್ಮುಖಿ | 50. ನಳ |
| 11. ಈಶ್ವರ | 31. ಹೇವಿಳಂಬಿ | 51. ಪಿಂಗಳ (ಪೈಂಗಳ) |
| 12. ಬಹುಧಾನ್ಯ | 32. ವಿಳಂಬಿ | 52. ಕಾಳಯುಕ್ತಿ |
| 13. ಪ್ರಮಾಥಿ | 33.ವಿಕಾರಿ | 53. ಸಿದ್ಧಾರ್ಥಿ |
| 14. ವಿಕ್ರಮ | 34. ಶಾರ್ವರಿ | 54. ರೌದ್ರಿ |
| 15. ವೃಷ(ವಿಷು) | 35. ಪ್ಲವ | 55. ದುರ್ಮತಿ |
| 16. ಚಿತ್ರಭಾನು | 36. ಶುಭಕೃತ್ | 56. ದುಂದುಭಿ |
| 17. ಸ್ವಭಾನು | 37. ಶೋಭಕೃತ್ | 57. ರುಧಿರೋದ್ಗಾರಿ |
| 18. ತಾರಣ | 38. ಕ್ರೋಧಿ | 58. ರಕ್ತಾಕ್ಷಿ |
| 19. ಪಾರ್ಥಿವ | 39. ವಿಶ್ವಾವಸು | 59. ಕ್ರೋಧನ |
| 20. ವ್ಯಯ | 40. ಪರಾಭವ | 60. ಅಕ್ಷಯ |

**ಚಾಂದ್ರಮಾನ ಮಾಸಗಳು**

ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಅಶ್ವಯುಜ, ಕಾರ್ತಿಕ, ಮಾರ್ಗಶಿರ (ಮಾರ್ಗಶೀರ್ಷ) ಪುಷ್ಯ, ಮಾಘ, ಫಾಲ್ಗುಣ.

**ಸೌರಮಾನಮಾಸಗಳು**

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನಸ್ಸು, ಮಕರ, ಕುಂಭ, ಮೀನಾ, (ಹನ್ನೆರಡು ರಾಶಿಗಳಿಗೂ ಈ ಹೆಸರುಗಳೇ ಇರುತ್ತವೆ)

**ತಿಥಿಗಳು**

ಪ್ರತಿಪತ್ (ಪಾಡ್ಯ) ದ್ವಿತೀಯಾ (ಬಿದಿಗೆ) ತೃತೀಯಾ(ತದಿಗೆ) ಚತುರ್ಥಿ (ಚೌತಿ) ಪಂಚಮೀ, ಷಷ್ಠೀ, ಸಪ್ತಮೀ, ಅಷ್ಟಮೀ, ನವಮೀ, ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶೀ, ಪೂರ್ಣಿಮಾ, (ಹುಣ್ಣಿಮೆ) – ಅಮಾವಾಸ್ಯೆ.

ಚಂದ್ರಮಾನದಂತೆ ಈ ತಿಥಿಗಳ ಗಣನೆ ಇರುತ್ತದೆ. ಹುಣ್ಣಿಮೆಯವರೆಗೆ ಶುಕ್ಲಪಕ್ಷ. ಅನಂತರ ಮತ್ತೆ ಪ್ರತಿಪತ್ತಿನಿಂದ ಅಮಾವಾಸ್ಯೆಯವರೆಗೆ ಎಣಿಕೆ, ಇದು ಕೃಷ್ಣಪಕ್ಷ. ಈ ಎರಡು ಪಕ್ಷಗಳು ಸೇರಿ ಒಂದು ಮಾಸ. ಸೌರಮಾನದ ಪ್ರಕಾರ 1ನೇ ತೇದಿ, 2 ನೇ ತೇದಿ ಈ ರೀತಿಯಲ್ಲಿ30 ತೇದಿಗಳು ಬರುತ್ತವೆ. ಒಂದೊಂದು ಸಲ 31 ತೇದಿಗಳು ಬರುವುದೂ ಉಂಟು. ತಾರೀಖಿನಂತೆ ತೇದಿಗಳ ಗಣನೆ.

**ಋತುಗಳು**

ಚೈತ್ರ, ವೈಶಾಖ = ವಸಂತ್ರುತು. ಜ್ಯೇಷ್ಠ, ಆಷಾಢ = ಗ್ರೀಷ್ಮಋತು, ಶ್ರಾವಣ, ಭಾದ್ರಪದ = ವರ್ಷಋತು. ಅಶ್ವಯುಜ, ಕಾರ್ತಿಕ = ಶರದೃತು. ಮಾರ್ಗಶಿರ, ಪುಷ್ಯ = ಹೇಮಂತಋತು ಮಾಘ, ಫಾಲ್ಗುಣ = ಶಿಶಿರಋತು.

ಹೀಗೆ ವರ್ಷಕ್ಕೆ 6 ಋತುಗಳು. ಚಾಂದ್ರಮಾನದಲ್ಲಿ ಸಾಮಾನ್ಯವಾಗಿ 3 ವರ್ಷಕ್ಕೆ ಒಂದು ಸಲ ಅಧಿಕ ಮಾಸ ಬರುತ್ತದೆ. ಅಧಿಕ, ಚೈತ್ರ, ಅಧಿಕ ವೈಶಾಖ– ಇತ್ಯಾದಿಯಾಗಿ ಇದರ ಹೆಸರು. ಇದನ್ನು ಪಂಚಾಂಗದಿಂದಲೇ ತಿಳಿದುಕೊಳ್ಳಬೇಕು.

ಇದನ್ನು ಮಲಮಾಸ ಎಂದೂ ಹೇಳುವುದುಂಟು. ಈ ಮಾಸದಲ್ಲಿ ಶುಭ ಕಾರ್ಯವನ್ನು ಮಾಡುವುದಿಲ್ಲ. ಹಿರಿಯರ ಶ್ರಾದ್ಧವೂ ಇಲ್ಲ. ಹೆಚ್ಚಿನ ಸಂಗತಿಯನ್ನು ಬಲ್ಲವರಿಂದ ತಿಳಿದುಕೊಳ್ಳತಕ್ಕದ್ದು.

ನಕ್ಷತ್ರಗಳು

| | | | |
|---|---|---|---|
| 1. ಅಶ್ವಿನಿ | 8. ಪುಷ್ಯ | 15. ಸ್ವಾತಿ | 22. ಶ್ರವಣ |
| 2. ಭರಣಿ | 9. ಆಶ್ಲೇಷ | 16. ವಿಶಾಖ | 23. ಧನಿಷ್ಠ |
| 3. ಕೃತ್ತಿಕಾ | 10. ಮಘಾ | 17. ಅನುರಾಧ | 24. ಶತಭಿಷ |
| 4. ರೋಹಿಣಿ | 11. ಹುಬ್ಬ | 18. ಜ್ಯೇಷ್ಠ | 25. ಪೂರ್ವಾಭಾದ್ರ |
| 5. ಮೃಗಶಿರ | 12. ಉತ್ತರಾ | 19. ಮೂಲ | 26. ಉತ್ತರಾಭಾದ್ರ |
| 6. ಆರ್ದ್ರ | 13. ಹಸ್ತ | 20. ಪೂವಾಷಾಢ | 27. ರೇವತಿ |
| 7. ಪುನರ್ವಸು | 14. ಚಿತ್ರ | 21. ಉತ್ತರಾಷಾಢ | |

ಗ್ರಹಣಗಳು

ಹುಣ್ಣಿಮೆಯ ದಿನ ಚಂದ್ರಗ್ರಹಣವೂ, ಅಮಾವಾಸ್ಯೆಯ ದಿನ ಸೂರ್ಯ ಗ್ರಹಣವೂ ಯಾವ ವರ್ಷದಲ್ಲಾದರೂ ಬರಬಹುದು. ಗ್ರಹಣ ಕಾಲವು ಜಪ, ದಾನಗಳಿಗೆ ಪ್ರಶಸ್ತವಾದದ್ದು, ಗ್ರಹಣಕಾಲದಲ್ಲಿ ಯಾರೂ ಆಹಾರವನ್ನು ಸೇವಿಸಬಾರದು. ಗ್ರಹಣಕ್ಕೆ ಮೊದಲು ಸಹ ಕೆಲವು ಗಂಟೆಯ ವರೆಗೆ ಆಹಾರವು ನಿಷಿದ್ಧವಾಗಿದೆ. ವಿವರವನ್ನು ಪಂಚಾಂಗದಲ್ಲಿ ಬರೆದಿರುತ್ತಾರೆ. ಗ್ರಹಣವು ಹಿಡಿದಾಗಲೂ ಬಿಟ್ಟಾಗಲೂ ಸ್ನಾನವನ್ನು ಮಾಡಬೇಕು.

ಗ್ರಸ್ಯಮಾನೇ ಭವೇತ್ ಸ್ನಾನಂ ಗ್ರಸ್ತೇ ಹೋಮೋ ವಿಧೀಯತೇ ।
ಮುಚ್ಯಮಾನೇ ಭವೇದ್ದಾನಂ ಮುಕ್ತೇ ಸ್ನಾನಂ ವಿಧೀಯತೇ ॥

''ಗ್ರಹಣ ಹಿಡಿದ ಕೂಡಲೇ ಸ್ನಾನ. ಅನಂತರ ಜಪ ಪೂಜಾದಿಗಳು. ಗ್ರಹಣವು ಬಿಡುತ್ತಿರುವಾಗ ದಾನ. ಬಿಟ್ಟ ಮೇಲೆ ಮತ್ತೆಸ್ನಾನ'' ಎಂಬುದು ವಿಧಿ.

1. ಗ್ರಹಣ ಹಿಡಿದಾಗ ಸ್ನಾನ ಮಾಡಿ ಸಂಕ್ಷಿಪ್ತವಾಗಿ ದೇವ ಪೂಜೆಯನ್ನು ಮಾಡಬೇಕು. ಅಥವಾ ಎಲ್ಲಾ ಪೂಜಾ ವಿಗ್ರಹಗಳನ್ನೂ ನೀರಲ್ಲಿ ಮುಳುಗಿಸಿ ಇಡುವ ಪದ್ಧತಿಯನ್ನು ಅನುಸರಿಸಬಹುದು.

2. ತನಗೆ ಉಪದಿಷ್ಟವಾದ ಗಾಯತ್ರೀ– ಮುಂತಾದ ಮಂತ್ರಗಳನ್ನು ಯಥಾಶಕ್ತಿ ಜಪಿಸತಕ್ಕದ್ದು.

3. ಗ್ರಹಣದ ಮಧ್ಯಕಾಲ ಕಳೆದ ಮೇಲೆ ತರ್ಪಣ ವಿಧಿಯಲ್ಲಿ ಹೇಳಿದಂತೆ ತರ್ಪಣವನ್ನಿತ್ತು, ಯಥಾಶಕ್ತಿ ಧನವನ್ನು ದಾನ ಮಾಡತಕ್ಕದ್ದು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಗಳನ್ನು ಉಚ್ಚರಿಸಿ ಅಸ್ಮಿನ್ ಚಂದ್ರ (ಸೂರ್ಯ) ಗ್ರಹಣ ಕಾಲೇ ಜನ್ಮರಾಶಿ ಜನ್ಮನಕ್ಷತ್ರ ಪ್ರಯುಕ್ತ ಸರ್ವದೋಷ ನಿವಾರಣಾರ್ಥಂ ಮನಸೋದ್ದಿಷ್ಟ ಬ್ರಾಹ್ಮಣಾಯ ತುಭ್ಯಮಿದಂ ಸಂಪ್ರದದೇ ಎಂದು ಹೇಳತಕ್ಕದ್ದು.

4. ಗ್ರಹಣಕ್ಕೆ ಪೂರ್ವದಲ್ಲಿ ಬೇಯಿಸಿದ ಯಾವ ಪದಾರ್ಥವನ್ನೂ ಗ್ರಹಣ ಬಿಟ್ಟ ಮೇಲೆ ಉಪಯೋಗಿಸಬಾರದು. ಗ್ರಹಣ ಕಾಲದಲ್ಲಿ ಧರಿಸಿದ ವಸ್ತ್ರಗಳನ್ನು ತೊಳೆದು ಹಾಕತಕ್ಕದ್ದು.

5. ಆಹಾರ ಸೇವನೆ, ಆ ದಿನ ಪ್ರಾಪ್ತವಾದ ಹಿರಿಯರ ಶ್ರಾದ್ಧ ಮುಂತಾದ ವಿಷಯವನ್ನು ಪಂಚಾಂಗದಿಂದ ತಿಳಿದುಕೊಳ್ಳಬೇಕು.

6. ಯಾವುದೇ ಅಶೌಚ ಬಂದಿದ್ದರೂ ಗ್ರಹಣ ನಿಮಿತ್ತಕವಾದ ಸ್ನಾನ, ಜಪ ತರ್ಪಣ, ದಾನಗಳು ಉಂಟು.

ಶುಭಕಾರ್ಯಗಳು

1. ಎಲ್ಲ ಶುಭಕಾರ್ಯಗಳಿಗೂ ಉತ್ತರಾಯಣವು ಪ್ರಶಸ್ತವಾದದ್ದು.

2. ಪುಷ್ಯಮಾಸವು ಶೂನ್ಯಮಾಸವೆಂದೂ, ಶುಭಕಾರ್ಯಕ್ಕೆ ಯೋಗ್ಯವಲ್ಲವೆಂದು ವಚನವಿದೆ. ಪುಷ್ಯಮಾಸದ ಜೊತೆಗೆ ಧನುರ್ಮಾಸವು ಸೇರಿದಾಗ ಮಾಸ ಪ್ರಶಸ್ತವಲ್ಲವೆಂದೂ ಕೆಲವರು ಹೇಳುತ್ತಾರೆ. ಹಾಗೆಯೇ ಮೀನಮಾಸ ಚೈತ್ರಮಾಸಗಳು ಸೇರಿದಾಗಲೂ ಪ್ರಶಸ್ತವಲ್ಲವೆಂದು ಹೇಳುತ್ತಾರೆ.

3. ಪಾಡ್ಯ, ಅಷ್ಟಮಿ, ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಮಣಗಳಲ್ಲಿ ಶುಭ ಕಾರ್ಯಗಳನ್ನು ನಡೆಸಕೂಡದು.

4. ರಾಹುಕಾಲದಲ್ಲಿಯೂ ಶುಭಕಾರ್ಯವನ್ನಾರಂಭಿಸಬಾರದೆಂಬ ಪದ್ಧತಿ ಕೆಲವರಲ್ಲಿದೆ. ಹವ್ಯಕರಲ್ಲಿಯೂ ಈ ಪದ್ಧತಿ ಈಚೆಗೆ ಕಂಡುಬರುತ್ತಿದೆ.

## ರಾಹುಕಾಲ

### ಹಗಲು

| | | | |
|---|---|---|---|
| ಭಾನುವಾರ | 4–30 | 6–00 | ಗಂಟೆಗಳವರೆಗೆ |
| ಸೋಮವಾರ | 7–30 | 9–00 | |
| ಮಂಗಳವಾರ | 3–00 | 4–30 | |
| ಬುಧವಾರ | 12–00 | 1–30 | |
| ಗುರುವಾರ | 1–30 | 3–00 | |
| ಶುಕ್ರವಾರ | 10–30 | 12–00 | |
| ಶನಿವಾರ | 9–00 | 10–30 | |

***

# ಮಹಿಳೆಯರಿಗೆ ಸೂಚನೆಗಳು

1. ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾ ಭೂಷಯಿತವ್ಯಾಶ್ಚ ಬಹು ಕಲ್ಯಾಣಮೀಪ್ಸುಭಿಃ ॥

- ಮನುಸ್ಮೃತಿ -3-55

ತಮಗೆ ಒಳ್ಳೆಯದಾಗಬೇಕೆಂದು ಬಯಸತಕ್ಕ ತಂದೆ- ತಾಯಿಗಳು ಸೋದರರು, ಗಂಡಂದಿರು, ಮೈದುನರು, ಇವರೆಲ್ಲರೂ ಸ್ತ್ರೀಯರಿಗೆ ಒಡವೆ ಮೊದಲಾದದ್ದನ್ನು ಕೊಟ್ಟು ಅವರನ್ನು ಗೌರವಿಸುತ್ತ ಇರಬೇಕು.

2. ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥

- ಮನುಸ್ಮೃತಿ - 3-56

ಯಾರ ಮನೆಯಲ್ಲಿ ಹೆಂಗಸರಿಗೆ ಗೌರವಾದರಗಳಿರುತ್ತವೆಯೋ ಅಲ್ಲಿ ದೇವತೆಗಳೂ ಸಂತುಷ್ಟರಾಗಿರುತ್ತಾರೆ. ಎಲ್ಲಿ ಹೆಂಗಸರಿಗೆ ಗೌರವಾದರಗಳು ಸಲ್ಲುವುದಿಲ್ಲವೋ ಅಲ್ಲಿಮಾಡುವ ಸಮಸ್ತಧಾರ್ಮಿಕಕಾರ್ಯಗಳು ನಿಷ್ಫಲವಾಗುತ್ತವೆ.

3. ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥

- ಮನುಸ್ಮೃತಿ - 3-5

ಆದ್ದರಿಂದ ಶ್ರೇಯಃಕಾಂಕ್ಷಿಗಳಾದ ಜನರು ಹಬ್ಬಗಳಲ್ಲಿಯೂ ಮದುವೆ ಮುಂಜಿ ಮುಂತಾದ ಉತ್ಸವ ಸಮಯದಲ್ಲಿಯೂ ಸ್ತ್ರೀಯರಿಗೆ ವಸ್ತ್ರ, ಒಡವೆ, ಆಹಾರಾದಿಗಳನ್ನು ಕೊಟ್ಟು ಉಪಚರಿಸಿ ಗೌರವಿಸಬೇಕು.

4. ಸ್ತ್ರಿಯಃ ಶ್ರೀಯಶ್ಚ ಗೇಹೇಷು ನ ವಿಶೇಷೋಸ್ತಿ ಕಶ್ಚನ ।

- ಮನುಸ್ಮೃತಿ - 9-2

ಸ್ತ್ರೀಯರೆಂದರೆ ಮನೆಗಳಲ್ಲಿರುವ ಲಕ್ಷ್ಮೀ ದೇವತೆಗಳು. ಸ್ತ್ರೀಯರಿಗೂ ಲಕ್ಷ್ಮೀ ದೇವಿಯರಿಗೂ ಯಾವ ವ್ಯತ್ಯಾಸವೂ ಇಲ್ಲ.

ಸ್ತ್ರೀಯರಿಗೆ ಉಪನಯನ, ವೇದಾಧ್ಯನಯನಗಳಿಲ್ಲವಾದ್ದರಿಂದ ಸಂಧ್ಯಾವಂದನೆ ಮುಂತಾದ ಧಾರ್ಮಿಕ ವಿಧಿಗಳು ಅವರಿಗೆ ನೇರವಾಗಿ ಇಲ್ಲ. ಅನೇಕ ಶಾಸ್ತ್ರೀಯ ಕಾರ್ಯಗಳಲ್ಲಿ ಅವರಿಗೆ ಪತಿಯೊಡನೆ ಸಹಭಾಗಿತೆ ಇದೆ. ಪತಿಯು ಮಾಡುವ ಎಲ್ಲ ಧರ್ಮ ಕಾರ್ಯಗಳಲ್ಲಿ ಅರ್ಧ ಪುಣ್ಯವು ಪತ್ನಿಗೆ ಸಲ್ಲುತ್ತದೆಯೆಂದು ಧರ್ಮಶಾಸ್ತ್ರವು ಹೇಳಿದೆ. ಆತನು ಪಾಪ ಕಾರ್ಯವನ್ನು ಮಾಡಿದಾಗ ಪಾಪದಲ್ಲಿ ಒಂದಂಶವೂ ಪತ್ನಿಗೆ ಇಲ್ಲವೆಂದು ಶಾಸ್ತ್ರವು ಹೇಳುತ್ತದೆ. ಸ್ತ್ರೀಯರ ವಿಷಯದಲ್ಲಿ ಧರ್ಮಶಾಸ್ತ್ರವು ಎಷ್ಟು ಉದಾರವಾಗಿದೆಯೆಂಬುದನ್ನು ಗ್ರಹಿಸಬೇಕು.

ಇಂದು ನಮ್ಮ ಮನೆಗಳಲ್ಲಿ ಬ್ರಾಹ್ಮಣ ಸಂಪ್ರದಾಯವು ಧಾರ್ಮಿಕ ವಿಧಿಯೂ ಸ್ವಲ್ಪವಾದರೂ ಉಳಿದುಕೊಂಡಿರುವುದಕ್ಕೆ ಗೃಹಿಣಿಯರ ಧರ್ಮ ಶ್ರದ್ಧೆ, ಸಹಕಾರಗಳೇ ಮೂಲ ಕಾರಣವೆಂಬುದರಲ್ಲಿಸಂದೇಹವಿಲ್ಲ. ಇದೇ ಬಗೆಯ ಉತ್ತಮ ಮನೋಭಾವ, ಸಹಕಾರಗಳಿದ್ದರೆ ಮಾತ್ರ ನಮ್ಮ ಈ ಗ್ರಂಥ ರಚನೆಯ ಉದ್ದೇಶವು ಸಾರ್ಥಕವಾಗುತ್ತದೆ. ಧಾರ್ಮಿಕ ವಿಧಿಗಳ ಪಾಲನೆಯಿಂದ ಮನೆಗೆ ವಿಶೇಷವಾದ ಒಂದು ಕಳೆ ಬರುತ್ತದೆ. ಇದು ಮನೆ, ಗೃಹ ಎನಿಸಿಕೊಳ್ಳುವುದು ಗೃಹಿಣಿಯರಿಂದ ''ಗೃಹಿಣೀ ಗೃಹಮುಚ್ಯತೇ'' – ''ಗೃಹಿಣೀಯೇ ಗೃಹ'' ಎಂಬ ನುಡಿ ಹೊರಟಿರುವುದು ಈ ಕಾರಣದಿಂದ. ಎಲ್ಲಿ ಧಾರ್ಮಿಕ ವಿಧಿಯು ನಡೆಯುವುದಿಲ್ಲವೋ ಅದು ಭಾರತೀಯರ ದೃಷ್ಟಿಯಲ್ಲಿ ಗೃಹವಲ್ಲ. ಅದೊಂದು ಭೋಜನ ಶಾಲೆ, ಬಿಡಾರ.

1. ಮನೆಯಿಂದ ಹೊರಗೆ ಹೋದಾಗ, ಉದ್ಯೋಗನಿಮಿತ್ತವಾಗಿ ಯಾವುದೇ ವೇಷಭೂಷಣಗಳಿದ್ದರೂ ಮನೆಯಲ್ಲಿರುವಾಗ ಮಹಿಳೆಯರು ಸಾಂಪ್ರದಾಯಿಕವಾದ ಉಡುಗೆ ತೊಡುಗೆಗಳನ್ನು ಧರಿಸಬೇಕು. ಕೈಯಲ್ಲಿ ಬಳೆ, ಹಣೆಯಲ್ಲಿ ಕುಂಕುಮ, ತಲೆಯಲ್ಲಿ ಹೂ– ಇದಕ್ಕಿಂತ ಪ್ರಶಸ್ತವಾದ ಅಲಂಕಾರವಿಲ್ಲ.

2. ಪ್ರತಿದಿನ ಪ್ರಾತಃಕಾಲ ಬಾಗಿಲಿಗೆ ನೀರು ಹಾಕಿ ಹೊಸ್ತಿಲಲ್ಲಿಯೂ ದೇವರೆದುರಿನಲ್ಲಿಯೂ ರಂಗವಲ್ಲಿಯನ್ನಿಡಬೇಕು.

3. ಮನೆಯಲ್ಲೊಂದು ತುಳಸೀ ಕಟ್ಟೆ ಇರಲಿ, ಪ್ರತಿ ದಿನ ಬೆಳಿಗ್ಗೆ ತುಳಸಿ ಪೂಜೆ ನಡೆಯುತ್ತಿರಲಿ.

4. ಸ್ನಾನ ಮಾಡಿಯೇ ಅಡಿಗೆ ಮಾಡಬೇಕೆಂಬ ನಿಯಮವನ್ನು ತಪ್ಪದೆ ಪಾಲಿಸಬೇಕು.

5. ಸಂಜೆಯ ಹೊತ್ತು ದೇವರಿಗೆ ದೀಪಹಚ್ಚಿ ಯಾವುದಾದರೂ ದೇವತಾ ಸ್ತೋತ್ರವನ್ನು ಪಠಿಸುವುದೂ ಭಜನೆ ಮಾಡುವುದೂ ಒಳ್ಳೆಯ ಪದ್ಧತಿ.

6. ಭಗವದ್ಗೀತೆ, ವಿಷ್ಣು ಸಹಸ್ರನಾಮ, ತ್ರಿಶತೀ– ಮುಂತಾದ ಗ್ರಂಥ ಪಾರಾಯಣಗಳನ್ನು ಇಟ್ಟುಕೊಳ್ಳಬಹುದು.

7. ಶ್ರೀಮದ್ರಾಮಾಯಣ, ಮಹಾಭಾರತ ಭಾಗವತ– ಮುಂತಾದ ಪೂಜ್ಯ ಗ್ರಂಥಗಳನ್ನು ಓದುವ ಅಭ್ಯಾಸವನ್ನಿರಿಸಿಕೊಳ್ಳಬೇಕು.

8. ಹಬ್ಬ ಹರಿದಿನಗಳಲ್ಲಿ ಮನೆ ಬಾಗಿಲಿಗೆ ತೋರಣ ಕಟ್ಟುವುದು ಪೂಜಾ ಸಾಮಗ್ರಿಗಳನ್ನು ಸಿದ್ಧಪಡಿಸುವುದು– ಮುಂತಾದ ಕಾರ್ಯದೆಡೆಗೆ ಗಮನವಿರಲಿ.

9. ವಿಶೇಷ ದಿನಗಳಲ್ಲಿ ಗೌರೀ ಪೂಜೆ, ಲಕ್ಷ್ಮೀಪೂಜೆ, ನಾಗಪೂಜೆ, ಮೊದಲಾದ್ದನ್ನು ಸ್ವತಃ ಮಾಡುವ ಪದ್ಧತಿ ಇದ್ದಲ್ಲಿ ಅದನ್ನು ಬಿಡಬಾರದು.

10. ಮಕ್ಕಳಲ್ಲಿ ಆಸ್ತಿಕ ಭಾವನೆಯನ್ನು ಬೆಳೆಸಿ, ಸಂಸ್ಕೃತಭಾಷೆ ಅಭ್ಯಾಸವನ್ನು ಪ್ರೋತ್ಸಾಹಿಸಬೇಕು. ಗಂಡುಮಕ್ಕಳಿಗೆ ಉಪನಯನವಾದ ಮೇಲೆ ಅವರು ಪ್ರತಿದಿನ ಸಂಧ್ಯಾವಂದನೆಯನ್ನು ಮಾಡಲು ತಿಳಿಸುತ್ತಿರಬೇಕು.

ಹವ್ಯಕಬ್ರಾಹ್ಮಣರಲ್ಲಿ ಹವ್ಯಕರ ಹಾಡು ಎಂದು ಪ್ರಸಿದ್ಧವಾಗಿರುವ ಒಂದು ಉತ್ತಮವಾದ ಸಾಹಿತ್ಯ ಉಂಟು. ಈ ಹಾಡುಗಳನ್ನು ಹಬ್ಬ, ಮದುವೆ, ಮುಂಜಿ, – ಮುಂತಾದ ಸಂದರ್ಭಗಳಲ್ಲಿ ಹಾಡುತ್ತಿದ್ದರು. ಹೆಣ್ಣು ಮಕ್ಕಳಿಗೆ ಕಲಿಸುತ್ತಿದ್ದರು. ಇದು ಈಗ ಲುಪ್ತಪ್ರಾಯವಾಗಿ ಮಹಿಳೆಯರು ಈ ಹಾಡುಗಳನ್ನು ಕಲಿತು ಹವ್ಯಕರ ಈ ವಿಧಿದ ಸಂಸ್ಕೃತಿಯನ್ನು ಊರ್ಜಿತಗೊಳಿಸಲೆಂದು ನಮ್ಮ ಆಸೆ.

# ಪ್ರಾರ್ಥನಾ ಶ್ಲೋಕಗಳು

ಈ ಶ್ಲೋಕ ನಿಮ್ಮ ಮಕ್ಕಳಿಗೆ ಕಂಠಪಾಠ ಮಾಡಿಸಿರಿ

1. ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

2. ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತಾಃ ಸ್ಯುಃ ತಂ ನಮಾಮಿ ಗಜಾನನಮ್ ॥

3. ಸರಸ್ವತಿ ನಮಸ್ತುಭ್ಯಂ ವರದೇ ಕಾಮರೂಪಿಣಿ ।
ವಿದ್ಯಾರಂಭಂ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ ॥

4. ಗುರುಬ್ರ್ಹಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ।

6. ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೆ ಗೌರಿ ನಾರಾಯಣಿ ನಮೋಸ್ತುತೇ ॥

7. ಪದ್ಮಾಸನಸ್ಥಿತೇ ದೇವಿ ಪರಬ್ರಹ್ಮಸ್ವರೂಪಿಣಿ ।
ಪರಮೇಶಿ ಜಗನ್ಮಾತರ್ಮಹಾಲಕ್ಷ್ಮಿ ನಮೋಸ್ತುತೆ ॥

8. ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ ।
ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ ।

9. ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥

10. ಜಯತು ಜಯತು ದೇವೋ ದೇವಕೀನಂದನೋಽಯಂ ।
ಜಯತು ಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ ॥
ಜಯತು ಜಯತು ಮೇಘ ಶ್ಯಾಮಲಃ ಕೋಮಲಾಂಗೋ ।
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ ॥

11. ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವ ದೇವ ॥

12. ಕರಚರಣಕೃತಂ ವಾ ಕರ್ಮ ವಾಕ್ಕಾಯಜಂ ವಾ
ಶ್ರವಣನಯನಜಂ ವಾ ಮಾನಸಂ ವಾಪರಾಧಮ್
ವಿದಿತಮವಿದಿತಂ ವಾ ಸರ್ವಮೇತತ್ಕ್ಷಮಸ್ವ
ಜಯ ಜಯ ಕರುಣಾಬ್ಧೇ ಶ್ರೀಮಹಾದೇವಶಂಭೋ ॥

---

## ಆಸ್ತಿಕ ಮಹಾಜನರಲ್ಲಿ ನಿವೇದನೆ

ಈಗಿನ ದೇಶ ಕಾಲ ಪರಿಸ್ಥಿತಿಗಳಲ್ಲಿ ಬ್ರಾಹ್ಮಣ್ಯದ ಮೂಲಭೂತ ಅಂಶವನ್ನಾದರೂ ಬಳಸಿಕೊಳ್ಳುವುದು ಹೇಗೆ? ಅತ್ಯಂತ ಸಂಕಷ್ಟ ಪರಿಸ್ಥಿತಿಯಲ್ಲಿರತಕ್ಕವರು ಕನಿಷ್ಠ ರೀತಿಯಲ್ಲಾದರೂ ಪಾಲಿಸಬೇಕಾದ ವಿಧಿ ಯಾವುದು–ಎಂಬ ಪ್ರಶ್ನೆಗಳಿಗೆ ಉತ್ತರವಾಗಿ ಚಿಕ್ಕ ಕೈಪಿಡಿಯನ್ನು ಬರೆಯಬೇಕೆಂಬುದು ಈ ಧಾರ್ಮಿಕ ಸಮಿತಿಯ ಉದ್ದೇಶವಾಗಿತ್ತು. ಈ ಸಮಿತಿಯು ಸಭೆ ಸೇರಿ ವಿಮರ್ಶಿಸಿದಾಗ, ಆ ಪುಸ್ತಕವು ಬಹಳ ಚಿಕ್ಕದಾಗುವುದೆಂದೂ ಹೆಚ್ಚಿನ ಉಪಯೋಗವಾಗಲಾರದೆಂದೂ ಕಂಡು ಬಂದಿತು. ರಜಾದಿನಗಳಲ್ಲಿ ಸೌಕರ್ಯ ವಾದಾಗ, ಅವಕಾಶ ದೊರಕಿದಾಗ– ಸ್ವಲ್ಪ ವಿಸ್ತೃತವಾಗಿಯೇ ಅನುಷ್ಠಾನವನ್ನು ಮಾಡಬೇಕೆಂದು ಶ್ರದ್ಧೆಯಿರುವ ಆಸ್ತಿಕ ಜನರು ಬಯಸುತ್ತಾರೆ. ಅಂತಹವರಿಗೂ ಮಾರ್ಗದರ್ಶನವಿರಬೇಕು. ಧಾರ್ಮಿಕ ವಿಧಿಯು ಸಂಕ್ಷಿಪ್ತವಾಗಿಯೂ ಇರಬೇಕು ಎಂಬ ಉದ್ದೇಶವನ್ನಿಟ್ಟುಕೊಂಡು ಈ ಗ್ರಂಥವನ್ನು ರಚಿಸಲಾಗಿದೆ. ಆದ್ದರಿಂದ ಪುಸ್ತಕವು ನಮ್ಮ ನಿರೀಕ್ಷೆಗಿಂತ ಹಿಗ್ಗಿತು. ಆದರೂ ಸಂಕ್ಷಿಪ್ತ ವಿಧಾನವನ್ನು ಅಲ್ಲಲ್ಲಿ ತಿಳಿಸುತ್ತ ಬರಲಾಗಿದೆ. ನಮ್ಮ ಉದ್ದೇಶದ ಸಾರ ಸಂಗ್ರಹವು ಕೆಳಗಿನಂತಿದೆ.

ಬ್ರಾಹ್ಮಣನು ನಿತ್ಯಸ್ನಾನ, ಸಂಧ್ಯಾವಂದನೆ, ದೇವರಪೂಜೆ, ಉಪಾಕರ್ಮ, ಹಿರಿಯರ ಶ್ರಾದ್ಧ– ಇವಿಷ್ಟನ್ನು ಎಂತಹ ಪರಿಸ್ಥಿತಿಯಲ್ಲಿಯೂ ಬಿಡಬಾರದು.

1. ಸಂಧ್ಯಾವಂದನೆ

ತ್ರಿಕಾಲಸಂಧ್ಯಾವಂದನೆಯನ್ನು ಇದರಲ್ಲಿ ಬರೆದಿದೆ. ಮಧ್ಯಾಹ್ನಿಕವನ್ನು ಪ್ರಾತಃಕಾಲದ ಸಂಧ್ಯಾವಂದನೆಯೊಡನೆ ಮಾಡಬಹುದು. ಆಚಮನ, ಪ್ರಾಣಾಯಾಮ, ಭಸ್ಮಧಾರಣೆ, ಸಂಕಲ್ಪ, ಪ್ರೋಕ್ಷಣೆ ಅರ್ಘ್ಯ ಪ್ರಧಾನ, ಹತ್ತು ಗಾಯತ್ರೀ ಜಪ– ಇವಿಷ್ಟು ಕನಿಷ್ಠ ವಿಧಿ. ಇದಕ್ಕೆ 10 ನಿಮಿಷಗಳು ಸಾಕು. ಇಷ್ಟನ್ನಾದರೂ ಮಾಡಿರಿ. ಬಸ್ಸು, ರೈಲುಗಳಲ್ಲಿ ದೀರ್ಘಪ್ರಯಾಣ ಮಾಡುವಾಗ, ಹೋಟೆಲುಗಳಲ್ಲಿ ತಂಗಿದಾಗ, ಮನಸ್ಸಿನಲ್ಲಿಯೇ ಈ ವಿಧಿಗಳನ್ನು ಸ್ಮರಿಸಿಕೊಳ್ಳಿ. ಇದು ಮಾನಸ ಸಂಧ್ಯಾವಂದನೆ.

2. ದೇವರ ಪೂಜೆ

ದೀಪ ಮತ್ತು ಊದಿನ ಕಡ್ಡಿಗಳನ್ನು ಹತ್ತಿಸಿ, ಯಾವುದಾದರೊಂದು ದೇವತಾ ಸ್ತೋತ್ರವನ್ನು ಹೇಳಿ, ದೇವರಿಗೆ ನಮಸ್ಕರಿಸಿ ಅನಿವಾರ್ಯವಾದಾಗ ಮಾನಸ ಪೂಜೆಯನ್ನು ಆಚರಿಸಬಹುದು.

3. ಉಪಾಕರ್ಮ

ಈ ಗ್ರಂಥದಲ್ಲಿ ಹೇಳಿದ್ದನ್ನು ಆಚರಿಸಲು ಸೌಕರ್ಯವಿಲ್ಲದಿದ್ದರೆ ಸಾಮೂಹಿಕ ಉಪಾಕರ್ಮದಲ್ಲಿ ಭಾಗವಹಿಸಬಹುದು. ಅದೂ ಸಾಧ್ಯವಾಗದೆ ಹೋದಲ್ಲಿ ಉಪಾಕರ್ಮದ ದಿನ ನೂತನ ಯಜ್ಞೋಪವೀತವನ್ನು ಪೂಜೆ ಮಾಡಿ ಧರಿಸಿ, ಹತ್ತುಗಾಯತ್ರೀ ಮಂತ್ರವನ್ನು ಜಪಿಸಿ, ದೇವರಿಗೆ ನಮಸ್ಕರಿಸಿ.

4. ಶ್ರಾದ್ಧ

ಇದರ ಅನುಕಲ್ಪ ವಿಧಿಗಳನ್ನು ಶ್ರಾದ್ಧ ಪ್ರಕರಣದಲ್ಲಿ ಬರೆದಿದೆ. ಅವುಗಳಲ್ಲಿ ಸಾಧ್ಯವಾದ ಒಂದು ಪ್ರಕಾರವನ್ನು ಆರಿಸಿಕೊಳ್ಳಿರಿ.

***

# ವಿಷಯ ವಿಶೇಷ

## 1. ಸ್ನಾನ

**ಅಸ್ನಾತೋ ನಾಚರೇತ್ ಕರ್ಮ ಜಪಹೋಮಾದಿಕಿಂಚನ ।**
**ಸ್ನಾತ್ವಾಧಿಕಾರೀ ಭವತಿ ದೈವೇಪಿತ್ರ್ಯೇಚ ಕರ್ಮಣಿ ॥**

(ಜಪಹೋಮ ಮುಂತಾದ ಯಾವುದೇ ಶಾಸ್ತ್ರೀಯ ಕರ್ಮವನ್ನು ಸ್ನಾನ ಮಾಡದೇ ಆಚರಿಸಕೂಡದು. ದೇವತೆಗಳನ್ನು ಅಥವಾಪಿತೃಗಳನ್ನು ಉದ್ದೇಶಿಸಿ ಮಾಡುವ ಕರ್ಮದಲ್ಲಿ ಸ್ನಾನ ಮಾಡಿ ಶುದ್ಧನಾದವನಿಗೇ ಅಧಿಕಾರವಿರುತ್ತದೆ) ಆದ್ದರಿಂದ ಸ್ನಾನ ಮಾಡಿದ ಮೇಲೇ ಶಾಸ್ತ್ರೀಯ ಕಾರ್ಯವನ್ನು ಆಚರಿಸಬೇಕು. ತಲೆಗೂ ಸ್ನಾನ ಮಾಡಿದರೆ ಮಾತ್ರ ಸ್ನಾನವೆನಿಸುತ್ತದೆ. ಸ್ತ್ರೀಯರು ಮಾತ್ರ ವಿಶೇಷ ದಿನಗಳಲ್ಲಿ ಶಿರಃ ಸ್ನಾನವನ್ನು ಮಾಡಬೇಕು. ಅವರಿಗೆ ಪ್ರತಿದಿನ ಶಿರಃ ಸ್ನಾನದ ಅವಶ್ಯಕತೆಯಿಲ್ಲ.

## 2. ಭಸ್ಮಧಾರಣೆ

ಭಸ್ಮವನ್ನು ವಿಭೂತಿಯೆಂದೂ ಕರೆಯುತ್ತಾರೆ. ಇದನ್ನು ಗೋಮಯ (ಹಸುವಿನ ಸಗಣಿ) ಮಾಡಿದ ಬೆರಣಿಯನ್ನು ಸುಟ್ಟು ತಯಾರಿಸುತ್ತಾರೆ. ಯಜ್ಞ ಕುಂಡದಲ್ಲಿ ಉಳಿದ ಭಸ್ಮವನ್ನಾದರೂ ಬಳಸಬಹುದು. ''ತ್ರಿಪುಂಡ್ರಂ ಕಾರಯೇತ್ಪಶ್ಚಾತ್ ಬ್ರಹ್ಮ ವಿಷ್ಣು ಶಿವಾತ್ಮಕಂ'' ''ದಿಗ್ ಭಸ್ಮ ರಹಿತಂ ಭಾಲಂ'' ''ವಿಭೂತಿಧಾರಣಾದೇವ ಸರ್ವೇಷು ತೀರ್ಥೇಷು ಸ್ನಾತೋಭವತಿ'' ಎಂಬುದಾಗಿ ಬೃಹಜ್ಜಾಬಾಲೋಪನಿಷತ್ತಿನಲ್ಲಿ ಹೇಳಿದೆ. ಎಂದರೆ– ಹಣೆಯಲ್ಲಿ ಹಚ್ಚುವ ಮೂರು ಸಾಲುಗಳಿರುವ– ವಿಭೂತಿಗೆ ತ್ರಿಪುಂಡ್ರವೆಂದು ಹೆಸರು. ಇದು ಬ್ರಹ್ಮವಿಷ್ಣುಶಿವ ಎಂಬ ತ್ರಿಮೂರ್ತಿ ಸ್ವರೂಪದ್ದಾಗಿದೆ. ಭಸ್ಮವನ್ನು ಹಚ್ಚದ ಹಣೆಗೆ ಧಿಕ್ಕಾರ ಎಂದು ತಾತ್ಪರ್ಯ. ಆದ್ದರಿಂದ ಬ್ರಾಹ್ಮಣನು ಸ್ನಾನವಾದ ಮೇಲೆ ವಿಭೂತಿಯನ್ನು ಧರಿಸಲೇಬೇಕು. ಸ್ತ್ರೀಯರು ಹಣೆಯಲ್ಲಿ ಕುಂಕುಮವನ್ನು ಧರಿಸಬೇಕೆಂದು ಧರ್ಮ ಶಾಸ್ತ್ರದಲ್ಲಿ ಹೇಳಿದೆ.

## 3. ಸಂಧ್ಯಾವಂದನೆ

'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ವೇದವಚನಗಳು, ಧರ್ಮಶಾಸ್ತ್ರಗಳು ಉಪನಯನವಾದವನಿಗೆ ನಿತ್ಯಸಂಧ್ಯಾವಂದನೆಯನ್ನು ಕಡ್ಡಾಯವಾಗಿ ಹೇಳಿದೆ. ಸಂಧ್ಯಾ ಎಂದರೆ ಸಂಧ್ಯಾ ಕಾಲದ ಅಧಿದೇವತೆ. ಸಂಧ್ಯಾಕಾಲವು ಮೂರು ವಿಧ– ರಾತ್ರಿ– ಹಗಲು– ಸೇರುವ ಕಾಲ– ಪ್ರಾತಃ ಸಂಧ್ಯಾ, ಪೂರ್ವಾಹ್ನ ಮತ್ತು ಅಪರಾಹ್ನಗಳು ಸೇರುವ ಕಾಲ ಮಧ್ಯಾಹ್ನ ಸಂಧ್ಯಾ. ಹಗಲು– ರಾತ್ರಿಗಳು ಸಂಧಿಸುವ ಕಾಲ– ಸಾಯಂ ಸಂಧ್ಯಾ.

**ಯಾ ಸಂಧ್ಯಾ ಸಾ ಜಗತ್ಸೂತಿಃ ಮಾಯಾತೀತಾ ಹಿ ನಿಷ್ಕಲಾ ।**
**ಈಶ್ವರೀ ಕೇವಲಾ ಶಕ್ತಿಃ ತತ್ತ್ವತ್ರಯ ಸಮುದ್ಭವಾ ॥**

ಮಾಯಾತೀತವೂ ನಿಷ್ಕಲವೂ ಜಗತ್ತಿನ ಸೃಷ್ಟಿಗೆ ಕಾರಣವೂ ಆದ ಶುದ್ಧವಾದ ಈಶ್ವರೀ ಶಕ್ತಿಯು ಸಂಧ್ಯಾ ಎನ್ನಿಸುತ್ತದೆ. ಇದು ಜಗತ್ತಿನ ಸೃಷ್ಟಿ– ಸ್ಥಿತಿ– ಪ್ರಳಯಗಳಿಗೆ ಕಾರಣವಾದದ್ದು. ಇತ್ಯಾದಿ ಶಾಸ್ತ್ರ ವಚನಗಳಿವೆ. ಈ ಸಂಧ್ಯಾ ವಂದನೆಯನ್ನು ಒಂದು ದಿನ ಮಾಡದಿದ್ದರೆ ಪ್ರಾಯಶ್ಚಿತ್ತವನ್ನು ವಿಧಿಸಲಾಗಿದೆ. ಹೆಚ್ಚಿನ ವಿಷಯವನ್ನು ಸಂಧ್ಯಾವಂದನಾ ವಿಧಿಯಲ್ಲಿ ಬರೆದಿದೆ. ಈ ಕರ್ಮವನ್ನು ಆಚರಿಸದಿದ್ದವನಿಗೆ ಯಾವ ಶಾಸ್ತ್ರೀಯ ಕರ್ಮದಲ್ಲೂ ಅಧಿಕಾರವಿಲ್ಲ.

## 4. ಯಜ್ಞೋಪವೀತ

ಇದನ್ನೇ ಜನಿವಾರವೆಂದೂ ಹೇಳುತ್ತಾರೆ. ಇದರ ಗಂಟಿಗೆ ಬ್ರಹ್ಮಗ್ರಂಥಿ ಎಂದು ಹೆಸರು.ಇದು ಪ್ರಣವ– ಓಂ ಕಾರವನ್ನು ಸೂಚಿಸುತ್ತದೆ. ಮೂರು ಎಳೆಗಳು ಗಾಯತ್ರಿಯ ಮೂರು ಪಾದಗಳನ್ನು ಸೂಚಿಸುತ್ತವೆ. ಒಂದೊಂದು ಎಳೆಯಲ್ಲಿರುವ ಸೂಕ್ಷ್ಮವಾದ ಎಳೆಗಳು ಮೂರು ವೇದಗಳನ್ನು ಪ್ರತಿನಿಧಿಸುತ್ತದೆ. ಇತ್ಯಾದಿಯಾಗಿ ಜನಿವಾರದ ವಿವರಗಳಿವೆ. ಇತರ ವಿವರಗಳನ್ನು ಯಜ್ಞೋಪವೀತ ಧಾರಣ ವಿಧಿಯ ಪ್ರಾರಂಭದಲ್ಲಿ ತಿಳಿಸಲಾಗಿದೆ. ಬ್ರಾಹ್ಮಣನು ಕಡ್ಡಾಯವಾಗಿ ಜನಿವಾರವನ್ನು ಧರಿಸಲೇಬೇಕು.

5. ಗಾಯತ್ರೀ ಮಂತ್ರ

''ಗಾಯಂತಂ ತ್ರಯಾತೇ ಯಸ್ಮಾತ್ ಗಾಯತ್ರೀಯಂ ತತಃ ಸ್ಮೃತಾ'' ।

ಜಪಿಸತಕ್ಕವನನ್ನು ರಕ್ಷಣೆಮಾಡುವುದರಿಂದ ಈ ಮಂತ್ರಕ್ಕೆ ಗಾಯತ್ರೀ ಮಂತ್ರವೆಂದು ಹೆಸರು. ಇದು ಸಮಸ್ತವೇದಗಳ ಸಾರಭೂತ ಮಂತ್ರವೆಂದು ಹೇಳಿದ್ದಾರೆ. ಬ್ರಹ್ಮೋಪದೇಶವೆನಿಸಿದ ಉಪನಯನದಲ್ಲಿ ಗಾಯತ್ರಿಯೇ ಪ್ರಧಾನವಾದದ್ದು. ಇದನ್ನೇ ಬ್ರಹ್ಮವೆಂದೂ ಕರೆಯಲಾಗಿದೆ. ಬ್ರಹ್ಮ– ಎಂದರೆ ವೇದ. ''ಗಾಯತ್ರ್ಯಾ ಬ್ರಾಹ್ಮಣಮಸೃಜತ'' ಎಂದು ವೇದವಚನವಿದೆ. ಗಾಯತ್ರೀ ಮಂತ್ರದಿಂದ ಬ್ರಹ್ಮನು ಬ್ರಾಹ್ಮಣರನ್ನು ಸೃಜಿಸಿದನು– ಎಂದು ಇದರ ಅರ್ಥ ಕಾಶೀಖಂಡದಲ್ಲಿ–

''ಗಾಯತ್ರ್ಯೇವ ಪರೋ ವಿಷ್ಣುಃ ಗಾಯತ್ರ್ಯೇವ ಪರಃ ಶಿವಃ ।
ಗಾಯತ್ರ್ಯೇವ ಪರೋ ಬ್ರಹ್ಮಾ ಗಾಯತ್ರ್ಯೇವ ತ್ರಯೀ ಮತಾ'' ॥

ಎಂದು ಹೇಳಿದೆ ''ಗಾಯತ್ರಿ ಎಂದರೆ ಪರಮಾತ್ಮನಾದ ವಿಷ್ಣು ಗಾಯತ್ರಿಯೇ ಪರಶಿವನೂ ಬ್ರಹ್ಮನೂ ಆಗಿದೆ. ಗಾಯತ್ರಿಯೆಂದರೆ ವೇದತ್ರಯವೇ ಸರಿ.''

ಈ ರೀತಿಯಲ್ಲಿ ಗಾಯತ್ರೀ ಮಂತ್ರವನ್ನು ವಿಶೇಷವಾಗಿ ಸ್ತುತಿಸಲಾಗಿದೆ.

( ಹೆಚ್ಚಿನ ವಿವರವನ್ನು ಬಯಸುವವರು ಶ್ರೀ ಕೋಟಾ ವಾಸುದೇವ ಕಾರಂತರು ರಚಿಸಿದ ''ಗಾಯತ್ರೀ ಜಪ'' ಗ್ರಂಥವನ್ನು ಓದಬಹುದು)

6. ದೇವರ್ಷಿಪಿತೃತರ್ಪಣ

ಮನುಷ್ಯನು ಹುಟ್ಟುವಾಗಲೇ ದೇವಋಣ, ಋಷಿಋಣ ಮತ್ತು ಪಿತೃಋಣ ಎಂಬ ಮೂರು ಋಣಗಳನ್ನು ಪಡೆದಿರುತ್ತಾರೆ. ಅನ್ನಪಾನೀಯ ಮುಂತಾದವುಗಳಿಂದ ದೇವಋಣ ಒದಗಿರುತ್ತದೆ. ಋಷಿಪ್ರಣೀತವಾದ ಶಾಸ್ತ್ರಗಳಿಂದಲೂ, ಋಷಿದೃಷ್ಟವಾದ ವೇದಗಳಿಂದಲೂ ಒದಗುವ ಅಪಾರವಾದ ಜ್ಞಾನಕ್ಕೆ ಅಧಿಕಾರಿಯಾಗಿರುವುದರಿಂದ ಋಷಿ ಋಣ ಒದಗಿರುತ್ತದೆ. ಹಾಗೆಯೇ ಪಿತೃದೇವತೆಗಳ ಅನುಗ್ರಹದಿಂದ ಶರೀರ ಲಾಭವೂ ಪಿತ್ರಾರ್ಜಿತವಾದ ಆಚಾರಪರಂಪರೆಯೂ, ಆಸ್ತಿಯೂ ಲಭಿಸಿರುತ್ತದೆ. ಈ

ಋಣತ್ರಯದಿಂದ ವಿಮುಕ್ತನಾಗಲೇ ಬೇಕು. ಅದಕ್ಕಾಗಿ ಹಲವಾರು ವಿಧಿಗಳನ್ನು ಶಾಸ್ತ್ರಕಾರರು ಹೇಳಿದ್ದಾರೆ. ದೇವರ್ಷಿಪಿತೃತರ್ಪಣಗಳು ಈ ಋಣತ್ರಯನ್ನು ಪರಿಹರಿಸಿಕೊಳ್ಳಲು ಸುಲಭ ಮಾರ್ಗವಾಗಿರುತ್ತದೆ. ತರ್ಪಣವೆಂದರೆ ತೃಪ್ತಿ ಪಡಿಸುವುದು ಎಂದು ಅರ್ಥ. ಭಕ್ತಿ ಶ್ರದ್ಧೆಗಳಿಂದ ಇವರನ್ನು ಸ್ಮರಿಸಿಕೊಂಡು ಜಲವನ್ನು ನೀಡುವುದರಿಂದಲೇ ದೇವರ್ಷಿಪಿತೃಗಳು ತೃಪ್ತರಾಗುತ್ತಾರೆ ಎಂಬು ಅಭಿಪ್ರಾಯ.

7. ಬ್ರಹ್ಮಯಜ್ಞ

ಬ್ರಹ್ಮವೆಂದರೆ ವೇದ. ವೇದಾಧ್ಯಯನವೇ ಬ್ರಹ್ಮ ಯಜ್ಞ. ''ಸ್ವಾಧ್ಯಾಯ ಪ್ರವಚನಾಣಭ್ಯಾಂ ನ ಪ್ರಮದಿತವ್ಯಂ'' ಎಂದು ಶಿಕ್ಷೋಪನಿಷತ್ತು ಹೇಳಿದೆ. ಸ್ವಾಧ್ಯಾ– ವೇದಾಧ್ಯಯನ, ಪ್ರವಚನ– ವೇದ ಶಾಸ್ತ್ರಗಳ ಅಧ್ಯಾಪನ. ಇವನ್ನು ಬ್ರಾಹ್ಮಣನು ಪ್ರತಿದಿನವೂ ಮಾಡುತ್ತಿರಲೇಬೇಕು. ಇವುಗಳ ಸಂಕೇತವಾಗಿ ಬ್ರಹ್ಮಯಜ್ಞವನ್ನು ವಿಧಿಸಲಾಗಿದೆ. ಈ ಬ್ರಹ್ಮಯಜ್ಞದಲ್ಲಿ ಎಲ್ಲ ವೇದ ಶಾಸ್ತ್ರಗಳ ಸಾರ ಸಂಗ್ರಹಿಸಲಾಗಿದೆ.

8. ವೈಶ್ವದೇವ

ವಿಶ್ವ– ಎಲ್ಲ, ದೇವ– ದೇವತೆಗಳಿಗೆ ಸಂಬಂಧಿಸಿದ ಕರ್ಮ– ವೈಶ್ವದೇವವೆನ್ನಿಸುತ್ತದೆ. ಶ್ರಾದ್ಧದಲ್ಲಿ ಬರುವ ವಿಶ್ವೇದೇವ ಶಬ್ಧಕ್ಕೂ ಇದಕ್ಕೂ ಸಂಬಂಧವಿಲ್ಲ

ವೈಶ್ವದೇವಃ ಪ್ರಕರ್ತವ್ಯಃ ಪಂಚಸೂನಾಪನುತ್ತಯೇ ।
ಖಂಡನೀ ಷೇಷಣೀ ಚುಲ್ಲೀ ಜಲಕುಂಭೋಽಥ ಮಾರ್ಜನೀ ॥

ಪಂಚಸೂನಗಳನ್ನು ಹೋಗಲಾಡಿಸುವುದಕ್ಕಾಗಿ ವೈಶ್ವದೇವವನ್ನು ವಿಧಿಸಲಾಗಿದೆ.

ಕತ್ತಿ ರುಬ್ಬುವಕಲ್ಲು, ಅಡಿಗೆ ಒಲೆ, ನೀರಿನ ಕೊಡ, ಕಸಬರಿಗೆ ಇವು ಐದು ಹಿಂಸಾಸ್ಥಾನಗಳು ಸೂನಾ– ಹಿಂಸಾಸ್ಥಾನ ಅಹಿಂಸಾಪರಮೋಧರ್ಮಃ ನ ಹಿಂಸ್ಯಾತ್ ಸರ್ವಬೂತಾನಿ ಇತ್ಯಾದಿ ವನಚಗಳಿಂದ ಅಹಿಂಸೆ ಶ್ರೇಷ್ಠವಾದ ಧರ್ಮವೆಂದು ಗೊತ್ತಾಗುತ್ತದೆ. ಆದರೆ ಗೃಹಸ್ಥರು ಅತಿ ಸೂಕ್ಷ್ಮವಾದ

ಕ್ರಿಮಿಕೀಟಾದಿಗಳಿಗೆ ಹಿಂಸೆಯನ್ನು ಕೊಡದೇ ಬಾಳಲು ಶಕ್ಯವಿಲ್ಲ. ಮೇಲೆ ಹೇಳಿದ ಕತ್ತಿಮೊದಲಾದವುಗಳಿಂದ ಹಿಂಸೆಯು ನಡದೇ ತೀರುವುದರಿಂದ ಆ ದೋಷದ ಪರಿಹಾರಕ್ಕಾಗಿ ವೈಶ್ವದೇವವನ್ನು ವಿಧಿಸಿದ್ದಾರೆ.

**9. ಪಂಚಗವ್ಯ (ಗೋಮಯ, ಗೋಮೂತ್ರ, ಹಾಲು, ಮೊಸರು, ತುಪ್ಪ)**

ಗವ್ಯವೆಂದರೆ ಗೋವಿನಿಂದ ಬಂದದ್ದು. ಐದು ಗವ್ಯಗಳು ಸೇರಿದ ವಸ್ತುವಿಗೆ ಪಂಚಗವ್ಯವೆಂದು ಹೆಸರು. ಗೋವನ್ನು ನಮ್ಮ ಧರ್ಮದಲ್ಲಿ ಅತ್ಯಂತ ಪವಿತ್ರವಾದ ಪಶುವೆಂದೂ, ನಮ್ಮನ್ನು ಪಾವನಗೊಳಿಸುವ ಶಕ್ತಿಗೋವಿಗೆ ಇದೆ ಎಂದೂ ಹೇಳಿದ್ದಾರೆ. ಆದ್ದರಿಂದ ಶಾರೀರಿಕವಾದ ಎಲ್ಲ ದೋಷಗಳನ್ನೂ ಪರಿಹರಿಸಿ, ಶರೀರಶುದ್ಧಿಯನ್ನುಂಟುಮಾಡುವ ಸಾಮರ್ಥ್ಯ ಪಂಚಗವ್ಯಕ್ಕಿದೆ.

**10. ಉತ್ಸರ್ಜನ - ಉಪಾಕರ್ಮ**

ಉಪಾಕರ್ಮವೆಂದರೆ ವೇದಾಧ್ಯಯನವನ್ನು ಪ್ರಾರಂಭಿಸುವಾಗ ಮಾಡುವ ಒಂದು ಸಂಸ್ಕಾರ ವಿಶೇಷ. ಉತ್ಸರ್ಜನವೆಂದರೆ ವೇದಾಧ್ಯಯನವನ್ನು ತಾತ್ಕಾಲಿಕವಾಗಿ ನಿಲ್ಲಿಸುವುದು ಎಂದು ಅರ್ಥ. ಶ್ರಾವಣದಲ್ಲಿ ವೇದಾಧ್ಯಯನವನ್ನು ಆರಂಭಿಸಿ, ಪುಷ್ಯ ಮಾಸದಲ್ಲಿ ತಾತ್ಕಾಲಿಕವಾಗಿ ನಿಲ್ಲಿಸಿ, ಶ್ರಾವಣದವರೆಗೆ ವೇದಾಂಗಗಳನ್ನೂ ಇತರ ಶಾಸ್ತ್ರಗಳನ್ನೂ ಅಧ್ಯಯನ ಮಾಡುವ ಪದ್ಧತಿ ಇತ್ತು. ಈಗ ಉತ್ಸರ್ಜನವನ್ನು ಪುಷ್ಯದಲ್ಲಿ ಪ್ರತ್ಯೇಕವಾಗಿ ಮಾಡದೇ ಉಪಾಕರ್ಮದ ಆರಂಭದಲ್ಲಿ ಮಾಡಿಕೊಂಡು ಅನಂತರ ಉಪಾಕರ್ಮವನ್ನು ಮಾಡಿಕೊಳ್ಳುವ ಪದ್ಧತಿ ಬಂದಿದೆ. ಈ ರೀತಿಯಲ್ಲಿ ನಮ್ಮ ವೈದಿಕ ಕರ್ಮಗಳೆಲ್ಲವೂ ಸಾಂಕೇತಿಕವಾಗಿ ಪರಿಣಮಿಸುತ್ತ ಬಂದಿವೆ. ಅಂತೆಯೇ ಸಂಕೇತ ರೂಪವಾಗಿಯಾದರೂ ಈ ಉತ್ಸರ್ಜನ – ಉಪಾಕರ್ಮಗಳನ್ನು ಅವಶ್ಯವಾಗಿ ಮಾಡಿಕೊಳ್ಳತಕ್ಕದ್ದು.

**11. ಯಜ್ಞೋಪವೀತ**

ಯಜ್ಞೋಪವೀತವನ್ನು ಉಪವೀತ, ಜನಿವಾರ – ಎಂದೂ ಹೇಳುತ್ತಾರೆ. ಉಪನಯನವಾದ ಮೇಲೆ ಇದನ್ನು ಸದಾ ಧರಿಸಲೇಬೇಕು. ಅಶೌಚ

ನಿವೃತ್ತಿಯಾದಾಗಲೂ ಅಕಸ್ಮಾತ್ ಹರಿದು ಹೋದರೂ ಹೊಸ ಜನಿವಾರವನ್ನು ಪೂಜಾ ಪೂರ್ವಕವಾಗಿ ಧರಿಸಬೇಕು. ಜನಿವಾರವಿಲ್ಲದೆ ಆಹಾರವನ್ನು ಸೇವಿಸಕೂಡದೆಂದು ವಿಧಿ ಇದೆ. ರಾತ್ರಿ ಹೊತ್ತು ಹರಿದುಹೋದರೆ ಉಪವಾಸವಿದ್ದು ಮಾರನೇ ದಿನ ಹೊಸದನ್ನು ಹಾಕಿಕೊಳ್ಳಬೇಕು.

ಜನಿವಾರದ ಎಳೆಗಳನ್ನು ಕೃತ್ರಿಮವಾಗಿ ಜೋಡಿಸಿ ಮಾರತಕ್ಕವರಿರುತ್ತಾರೆ. ಆದ್ದರಿಂದ ನಂಬಿಕೆಯಾದ ಸ್ಥಳದಲ್ಲಿ ವಿಶ್ವಾಸ ಯೋಗ್ಯವರಾದ ಜನರಿಂದಲೇ ಜನಿವಾರಗಳನ್ನು ಪಡೆದು ತಂದುಕೊಳ್ಳಬೇಕು. ಯಜ್ಞೋಪವಿತದಲ್ಲಿ ಹಾಕಿರುವ ಗಂಟಿಗೆ 'ಬ್ರಹ್ಮಗ್ರಂಥಿ' ಎಂದು ಹೆಸರು. ತಜ್ಞರಾದವರೇ ಈ ಗ್ರಂಥಿಯನ್ನು ಹಾಕಿರಬೇಕು.

1. ಉಪವೀತ – ಜನಿವಾರವು ಎಡ ಹೆಗಲಿನ ಮೇಲಿದ್ದು ಬಲಗೈಯ ಕೆಳಗೆ ಬರುವಂತೆ ಧರಿಸಿದರೆ ಉಪವೀತವೆನಿಸುವುದು. ಹೀಗೆ ಧರಿಸಿದವನು ಉಪವೀತಿ ಅಥವಾ ಯಜ್ಞೋಪವೀತಿ. ಸಂಧ್ಯಾವಂದನೆ ಮುಂತಾದ ಎಲ್ಲ ಶುಭಕಾರ್ಯಗಳಲ್ಲಿಯೂ ಯಜ್ಞೋಪವೀತಿಯಾಗಿರಬೇಕು.

2. ನಿವೀತಿ – ಜನಿವಾರವು ಮಾಲಾಕಾರವಾಗಿ ಧರಿಸಲ್ಪಟ್ಟರೆ ನಿವೀತವೆನಿಸುವುದು. ಋಷಿ ತರ್ಪಣಾದಿಗಳಲ್ಲಿ ನಿವೀತಿಯಾಗಿರಬೇಕು. ಅಲ್ಲದೆ ಮಲಮೂತ್ರ ವಿಸರ್ಜನ ಕಾಲದಲ್ಲಿಯೂ ಕ್ಷೌರ ಮಾಡಿಸಿಕೊಳ್ಳುವಾಗಲೂ ಜನಿವಾರವನ್ನು ಮಾಲಾಕಾರವಾಗಿ ಮಾಡಿಕೊಳ್ಳಬೇಕು.

3. ಪ್ರಾಚೀನಾವೀತಿ – ಜನಿವಾರವು ಬಲ ಹೆಗಲಿನ ಮೇಲಿದ್ದು ಎಡಗೈಯ ಕೆಳಗೆ ಬರುವಂತೆ ಧರಿಸಿದರೆ ಪ್ರಾಚೀನಾವಿತವೆನಿಸುವುದು. ಪಿತೃ ಕಾರ್ಯದಲ್ಲಿ ಪ್ರಾಚೀನಾವೀತಿಯಾಗಿಬೇಕು. ಶ್ರಾದ್ಧ ಪ್ರಯೋಗದಲ್ಲಿ ಪ್ರಾಚೀನಾವೀತಿಯೆಂದೂ, ಉಪವೀತಿಯೆಂದು ಅಲ್ಲಲ್ಲಿ ಬರೆದಿದೆ. ಅದನ್ನು ಲಕ್ಷ್ಯದಲ್ಲಿಡಬೇಕು.

****

# ಸಂಧ್ಯಾವಂದನ ವಿಧಿಃ

ಪ್ರಾತಃ ಸ್ನಾತ್ವಾ, ಧೌತವಸ್ತ್ರಂ ಧೃತ್ವಾ, ಸ್ವಾಸನೇ ಪ್ರಾಙ್ಮುಖೋವಾ ಉದಙ್ಮುಖೋವಾ ಉಪವಿಶ್ಯ

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ।
ಯಃ ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥

ಇತಿ ಜಲೇನ ಆತ್ಮನಾಂ ಪ್ರೋಕ್ಷ್ಯ ವಿಷ್ಣೋ ವಿಷ್ಣೋ ವಿಷ್ಣೋ ಇತಿ ವಿಷ್ಣೋಃ ಸ್ಮರಣಂಕೃತ್ವಾ

(ಆಚಮನವಮ್)

ಓಂ ಋಗ್ವೇದಾಯ ಸ್ವಾಹಾ ಓಂ ಯಜುರ್ವೇದಾಯ ಸ್ವಾಹಾ, ಓಂ ಸಾಮವೇದಾಯ ಸ್ವಾಹಾ ಏವಂ ತ್ರಿ ವಾರಂ ಜಲಂ ಪೀತ್ವಾ ಹಸ್ತೌಪ್ರಕ್ಷಾಲ್ಯ ದಕ್ಷಿಣ ಕರ್ಣಂ ಸ್ಪೃಶೇತ್ ॥

(ಭಸ್ಮಧಾರಣಮ್)

ಸಿತಂ ಭಸ್ಮಮಧ್ಯಮಾನಾಮಿಕಾಂಗುಷ್ಠೈಃ ಲಲಾಟೇ ವಕ್ಷಸಿ, ಬಾಹ್ವೋಃ ಕಂಠೇ ಶಿರಸಿ ಚ ಕ್ರಮೇಣ ತ್ರಿಪುಂಡ್ರಂ ಧಾರಯೇತ್, ಯಥಾ– ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನವಮ್ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ,ಮಾಮೃತಾತ್। ಇತಿಮಂತ್ರೇಣ ಭಸ್ಮ ಧೃತ್ವಾ ದ್ವಿರಾಚಮೇತ್ ।

(ಪ್ರಾಣಾಯಾಮಃ)

ಪ್ರಣವಸ್ಯ ಪರಬ್ರಹ್ಮ ಋಷಿಃ । ದೈವೀ ಗಾಯತ್ರೀ ಛಂದಃ । ಪರಬ್ರಹ್ಮ ಪರಮಾತ್ಮಾ ದೇವತಾ ।

ಪ್ರಾಣಾಯಾಮೇ ವಿನಿಯೋಗಃ।ಓ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಮ್ ಸತ್ಯಮ್

ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್ ।

ಓಮಾಪೋಜ್ಯೋತೀ ರಸೋಮೃತಂಬ್ರಹ್ಮ ಭೂರ್ಭುವಸ್ಸುವರೋಂ ಇತಿ ತ್ರಿವಾರಮುಕ್ತ್ವಾ ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತಃ ಸಂಧ್ಯಾಮುಪಾಸಿಷ್ಯೇ, ತಿ ಸಂಕಲ್ಪ್ಯ, ಮಾರ್ಜನಂ ಕುರ್ಯಾತ್ ।

(ಮಾರ್ಜನಮ್)

ಓಂ ಅಪೋಹಿಷ್ಠಾ ಮಯೋಭುವಃ। ತಾನ ಊರ್ಜೇ ದಧಾತನ। ಮಹೇರಣಾಯಚಕ್ಷಸೇ॥ ಓಂ ಯೋವಃ ಶಿವತಮೋರಸಃ।

ತಸ್ಯಭಾಜಯತೇಹನಃ । ಉಶತೀರವ ಮಾತರಃ ॥ ಓಂ ತಸ್ಮಾ ಅರಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ । ಆಪೋ ಜನಯಥಾಚನಃ ॥ ಇತಿ ಪಾದಶಿರೋ ಹೃದಯೇಷು ಯಥಾ ಕ್ರಮಂ ಮಾಜರ್ಯಿತ್ವಾ, ಹಸ್ತೇನ ಜಲಮಾದಾಯ ಮಂತ್ರಾಚಮನಂ ಕುರ್ಯಾತ್॥

(ಮಂತ್ರಾಚಮನಂ)

ಓಂ ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ ॥ ಪಾಪೇಭ್ಯೋ ರಕ್ಷಂತಾಮ್। ಯದ್ರಾತ್ರಿಯಾ ಪಾಪಮಕಾರ್ಷಂ. ಮನಸಾವಾಚಾ ಹಸ್ತಾಭ್ಯಾಂ । ಪದ್ಭ್ಯಾಮುದರೇಣ ಶಿಶ್ನಾ । ರಾತ್ರಿ ಸ್ತವಲುಂಪತು । ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ । ಸೂರ್ಯೇಜ್ಯೋತಿಷಿ ಜುಹೋಮಿ ಸ್ವಾಹಾ । ಇತಿ ಮಂತ್ರಾಚಮನಂ ಕೃತ್ವಾದ್ವಿರಾಚಮ್ಯ, ಪುನರ್ಮಾರ್ಜಯೇತ್ ॥

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ। ಸುರಭಿನೋ ಮುಖಾಕರತ್ಪ್ರಣ ಆಯೂಂಷಿ ತಾರಿಷತ್ ॥

ಓಂ ಅಪೋಹಿಷ್ಠಾ ಮಯೋಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ। ಓಂ ಯೋ ವಃ ಶಿವತಮೋರಸಸ್ತಸ್ಯ ಭಾಜಯತೇಹನಃ। ಉಶತೀರಿವ ಮಾತರಃ। ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯಜಿನ್ವಥ। ಆಪೋ ಜನಯಥಾಚ ನಃ॥

ಇತಿ ಮಾರ್ಜಯಿತ್ವಾ, ಸೂರ್ಯಾಭಿಮುಖಸ್ತಿಷ್ಠನ್ ಅರ್ಘ್ಯ ಪ್ರದಾನಂ ಕುರ್ಯಾತ್॥

(ಅರ್ಘ್ಯ ಪ್ರದಾನಮ್)

( ಅಂಗುಷ್ಠ ತರ್ಜನೀವರ್ಜಿತಾಂಜಲಿನಾ ಜಲಮಾದಾಯ)

ಓಂ ಭೂರ್ಭುವಃ ಸುವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ । ಇತ್ಯುಚ್ಚಾರ್ಯ, ಓಂ ಭಾಸ್ಕರಾಯ ನಮಃ ಇದಮರ್ಘ್ಯಂ, ಇತ್ಯರ್ಘ್ಯಂ ದದ್ಯಾತ್ । ಇತ್ಯೇಕಮ್ ।

ಓಂ ಭೂರ್ಭುವಃ ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ (ಇತ್ಯುಚ್ಚಾರ್ಯ) ಓಂ ಭಾಸ್ಕರಾಯ ನಮಃ ಇದಮರ್ಘ್ಯಂ । ಇತ್ಯರ್ಘ್ಯಂ ದದ್ಯಾತ್। ಇತಿ ದ್ವಿತೀಯಮ್ ।

ಓಂ ಭೂರ್ಭುವಃ ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ (ಇತ್ಯುಚ್ಚಾರ್ಯ) ಓಂ ಭಾಸ್ಕರಾಯ ನಮಃ ಇದಮರ್ಘ್ಯಂ । ಇತ್ಯರ್ಘ್ಯಂ ದದ್ಯಾತ್। ಇತಿ ತೃತೀಯಮ್ ।

ಕಾಲಾತಿಕ್ರಮದೋಷ ಪರಿಹಾರಾರ್ಥಂ ಪ್ರಾಯಶ್ಚಿತ್ತಾರ್ಘ್ಯಂ ಕರಿಷ್ಯೇ। ಇತಿ ಸಂಕಲ್ಪ್ಯ ।

ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಜನಃ ಓಂ ತಪಃ ಓಂ ಸತ್ಯಂ ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋನಃ ಪ್ರಚೋದಯಾತ್ ।ಓಂ ಭೂಃ ಓಂ ಭುವಃ ಓಂ ಸುವಃ ಓಂ ಜನಃ ಓಂ ತಪಃ ಓಂ ಸತ್ಯಂ ಭಾಸ್ಕರಾಯ ನಮಃ ಇದಮರ್ಘ್ಯಮ್ । )ಇತಿ ಸಪ್ತವ್ಯಾಹೃತಿ ಸಂಪುಟಿತ ಗಾಯತ್ರ್ಯಾ ಏಕಮರ್ಘ್ಯಂ ದದ್ಯಾತ್)ತತಃ ಓಂ ಅಸಾವಾದಿತ್ಯೋ ಬ್ರಹ್ಮ ಇತಿ ಜಲಹಸ್ತ ಪ್ರದಕ್ಷಿಣಂ ಕುರ್ಯಾತ್ )

(ಉಪವಿಶ್ಯ, ದ್ವಿರಾಚಮೇತ್)

ತತಃ ಓಂ ಹ್ರೀಂ ಪರಮಾತ್ಮಾದ್ಯಶೇಷ ಗುರುಪಾರಂಪರ್ಯ ಕ್ರಮೇಣ ಸ್ವಗುರು ಪಾದಾಂಬುಜಂ ಯಾವತ್ತಾವತ್ಪ್ರಣೌಮಿ ಇತಿ ಸ್ವಗುರೂನ್ ನಮಸ್ಕೃತ್ಯ, ಉಪವಿಶ್ಯ,

ಆಚಮ್ಯ, ಗಾಯತ್ರೀ ಜಪಂ ಕುರ್ಯಾತ್ ।

(ಗಾಯತ್ರೀ ಜಪಃ)

ವಿಶ್ವಾಮಿತ್ರ ಋಷಿ। ದೇವೀ ಗಾಯತ್ರೀ ಛಂದಃ। ಸವಿತಾ ದೇವತಾ। ತತ್ಸವಿತುಃ ಬ್ರಹ್ಮಾತ್ಮನೇ (ಅಂಗುಷ್ಠಿಕಾಭ್ಯಾಂ ನಮಃ) ಹೃದಯಾಯ ನಮಃ । ವರೇಣ್ಯಂ ವಿಷ್ಣ್ವಾತ್ಮನೇ (ತರ್ಜನೀಭ್ಯಾಂ ನಮಃ) ಶಿರಸೇ ಸ್ವಾಹಾ । ಭರ್ಗೋ ದೇವಸ್ಯ ರುದ್ರಾತ್ಮನೇ (ಮಧ್ಯಮಾಭ್ಯಾಂ ನಮಃ) ಶಿಖಾಯೈವೌಷಟ್ । ಧೀಮಹಿ ಈಶ್ವರಾತ್ಮನೇ (ಅನಾಮಿಕಾಭ್ಯಾಂ ನಮಃ) ಕವಚಾಯ ಹುಮ್। ಧಿಯೋ ಯೋನಃ ಸದಾಶಿವಾತ್ಮನೇ (ಕನಿಷ್ಠಿಕಾಭ್ಯಾಂ ನಮಃ ) ನೇತ್ರ ತ್ರಯಾಯವೌಷಟ್ । ಪ್ರಚೋದಯಾತ್, ಸರ್ವಾತ್ಮನೇ (ಕರತಕರಪೃಷ್ಠಾಭ್ಯಾಂ ನಮಃ) ಅಸ್ತ್ರಾಯಫಟ್। ಭೂರ್ಭುವಸ್ಸುರೋಮಿತಿ ದಿಗ್ಬಂಧಃ। ಧ್ಯಾನಮ್ ।

ಮಂದಾರಾಹ್ವಯ ರೋಚನಾಂಜನ ಜಪಾಖಾಭೈರ್ಮುಖೈರಿಂದುಮ ।
ದ್ರತ್ನೋದ್ಯನ್ಮಕುಟಾಂಶು ಸಂತತ ಚತುರ್ವಿಂಶಾರ್ಣಚಿತ್ರಾ ತನುಃ।
ಅಂಭೋಜೇರಿದರಾಹ್ವಯೌ ಗಣಕಪಾಲಾಖ್ಯೌಚ ಪಾಶಾಂಕುಶೇ
ಷ್ವಾಭೀತೀರ್ದಧತೀ ಭವೇದ್ಭವಭಯ ಪ್ರೋತ್ಸಾರಿಣೀ ತಾರಿಣೀ ॥

ಓಮಿತ್ಯೇಕಾಕ್ಷರಂಬ್ರಹ್ಮ ಅಗ್ನಿರ್ದೇವತಾ ಬ್ರಹ್ಮ ಇತ್ಯಾರ್ಷಂ ಗಾಯತ್ರಂ ಛಂದಂ ಪರಮಾತ್ಮಂ ಸ್ವರೂಪಂ ಸಾಯುಜ್ಯಂ ವಿನಿಯೋಗಂ । ಆಯಾತು ವರದಾದೇವೀ ಅಕ್ಷರಂ ಬ್ರಹ್ಮ ಸಮ್ಮಿತಂ । ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವ ಮೇ । ಯದಹ್ನಾತ್ಕುರುತೇ ಪಾಪಂ ತದಹ್ನಾತ್ಪ್ರತಿ ಮುಚ್ಯತೇ। ಯದ್ರಾತ್ರಿಯಾತ್ಕುರುತೇ ಪಾಪಂ ತದ್ರಾತ್ರಿಯಾತ್ಪ್ರತಿಮುಚ್ಯತೇ । ಸರ್ವವರ್ಣೇ ಮಹಾದೇವಿ ಸಂಧ್ಯಾ ವಿದ್ಯೇ ಸರಸ್ವತಿ । ಓಜೋಽಸಿ ಸಹೋಽಸಿ ಬಲಮಸಿ ಭ್ರಾಜೋಽಸಿ ದೇವಾನಾಂ ಧಾಮನಾಮಾಸಿ ವಿಶ್ವಮಸಿ ವಿಶ್ವಾಯುಃ ಸರ್ವಮಸಿ ಸರ್ವಾಯುರಭಿ ಭೂರೋಂ ಗಾಯತ್ರೀಮಾವಾಹಯಾಮಿ ಸಾವಿತ್ರೀ ಮಾವಾಹಯಾಮಿ ಸರಸ್ವತೀಮಾವಾಹಯಾಮಿ ಛಂದರ್ಷೀನಾವಾಹಯಾಮಿ ಶ್ರೀಯಮಾವಾಹಯಾಮಿ ಗಾಯತ್ರಿಯಾ ಗಾಯತ್ರೀ ಛಂದಃ । ವಿಶ್ವಾಮಿತ್ರ ಋಷಿಃ। ಸವಿತಾ ದೇವತಾ ಅಗ್ನಿ ರ್ಮುಖಂ ಬ್ರಹ್ಮಾಶಿರೋ ವಿಷ್ಣುರ್ಹೃದಯಂ । ರುದ್ರಃ ಶಿಖಾ ಪೃಥಿವೀ ಯೋನಿಃ ಪ್ರಾಣಾಪಾನ ವ್ಯಾನೋದಾನಸಮಾನಾ

ಸ್ವಪ್ರಾಣಾ ಶ್ವೇತವರ್ಣಾಸಾಂಖ್ಯಾಯನ ಸಗೋತ್ರಾ ಗಾಯತ್ರೀ ಚತುರ್ವಿಂಶತ್ಯಕ್ಷರಾ ತ್ರಿಪದಾ ಷಟ್ಕುಕ್ಷಿಃ। ಪಂಚಶೀರ್ಷೋಪನಯನೇ ವಿನಿಯೋಗಃ ಓಂ ಭೂಃ ಓಂ ಭುವಃ ಓಂ ಸುವಃ ಓ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ। ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ । ಓಮಾಪೋಜ್ಯೋತೀರಸೋಮೃತಂ ಬ್ರಹ್ಮ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೊದಯಾತ್ । (ಇತಿ ಗಾಯತ್ರೀಂ ದಶವಾರಂ ಶತವಾರಂ ಸಹಸ್ರವಾರಂ ವಾ ಯಥಾಶಕ್ತಿ ಜಪೇತ್)

(ಉಪಸ್ಥಾನಮ್)

(ಅಥೋತ್ಥಾಯ ಪ್ರಾಙ್ಮುಖಃ ಆದಿತ್ಯಮುಪತಿಷ್ಠತೇ) ಓಂ ಮಿತ್ರಸ್ಯ ಚರ್ಷಣೀ ಧೃತ ಶ್ರವೋ ದೇವಸ್ಯ ಸಾನಸಿಂ। ಸತ್ಯಂ ಚಿತ್ರ ಶ್ರವಸ್ತಮಮ್। ಮಿತ್ರೋಜನಾನ್ ಯಾತಯತಿ ಪ್ರಜಾನನ್ ಮಿತ್ರೋದಾಧಾರ ಪೃಥಿವೀಮುತದ್ಯಾಮ್ । ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಸತ್ಯಾಯ ಹವ್ಯಂ ಘೃತವದ್ವಿಧೇಮ। (ಇತ್ಯುಪಸ್ಥಾಯ) ಅಭಿವಂದೇತ।

(ಅಭಿವಾದನಮ್)

(ಅಥ ಸ್ವಸ್ತಿಕಾಕೃತಿಹಸ್ತಾಭ್ಯಾಂ)

ಈ ಅಭಿವಾದನದಲ್ಲಿ ಅವರವರ ಗೋತ್ರ ಪ್ರವರಾದಿಗಳನ್ನು ಅಮುಕ ಎಂಬ ಸ್ಥಾನದಲ್ಲಿ ಸೇರಿಸಿಕೊಂಡು ಹೇಳಿಕೊಳ್ಳಬೇಕು. ನಮೂನೆಗಾಗಿ ಇಲ್ಲಿ ತೋರಿಸಲಾಗಿದೆ.

ಶ್ರೀ ಮದ್ಯಜುಃಶಾಖಾಬೋಧಾಯನಸೂತ್ರಾನ್ವಿತವಿಶ್ವಾಮಿತ್ರದೇವರಾತ ಔದಲೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಿಶ್ವಾಮಿತ್ರ ಗೋತ್ರೋತ್ಪನ್ನ ನರಸಿಂಹ ಶರ್ಮಾऽ ಅಹಮಸ್ಮಿ ಅಹಂಭ್ಯೋ ಅಭಿವಾದಯೇ।

ಶ್ರೀ ಮದ್ಯಜುಃ ಶಾಖಾಭೋಧಾಯನ ಸೂತ್ರಾನ್ವಿತ ಅಮುಕ ಪ್ರವರಾನ್ವಿತ ಅಮುಕ ಗೋತ್ರೋತ್ಪನ್ನ ಅಮುಕ ಶರ್ಮಾऽ ಅಹಮಸ್ಮಿ ಅಹಂಭ್ಯೋ ಅಭಿವಾದಯೇ ಇತಿ ಭೂಮಿಂ ಸ್ಪೃಷ್ಟ್ವಾ ಅಭಿವಾದ್ಯ ಗಾಯತ್ರೀ ಮುದ್ವಾಸಯೇತ್ ಉತ್ತರಾಭಿಮುಖಃ

ಯಾಂ ಸದಾಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।
ಸಾಯಂ ಪ್ರಾತರ್ನಮಸ್ಯಂತಿ ಸಾ ಮಾ ಸಂಧ್ಯಾಭಿರಕ್ಷತು ।

ಉತ್ತಮೇ ಶಿಖರೇ ಜಾತೆ ಭೂಮ್ಯಾಂ ಪರ್ವತಮೂರ್ಧನಿ ।

ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಮ್ ।

ಸ್ತುತಾಮಯಾ ವರದಾವೇದಮಾತಾ ಪ್ರಚೋದಯಂತೀ ಪವನೇದ್ವಿಜಾತಾ।

ಆಯುಃ ಪೃಥಿವ್ಯಾಂ ದ್ರವಿಣಂ ಬ್ರಹ್ಮವರ್ಚಸಂ ಮಹ್ಯಂ ದತ್ವಾ ಪ್ರಜಾತುಂ ಬ್ರಹ್ಮಲೋಕಮ್ ।

ಚತುಸ್ಸಾಗರ ಪರ್ಯಂತಂ ಗೋಬ್ರಾಹ್ಮಣೇಭ್ಯಃ ಶುಭಂ ಭವತು ।
ಸರ್ವೇ ಜನಾಃ ಸುಖಿನೋ ಭವಂತು ।
ಆಕಾಶಾತ್ಪತೀತಂ ತೋಯಂ ಯಥಾಗಚ್ಛತಿ ಸಾಗರಂ ।
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥

ಅನೇನ ಪ್ರಾತಃ ಸಂಧ್ಯಾವಂದನ ಕರ್ಮಣಾ ಶ್ರೀಪರಮೇಶ್ವರಃ ಪ್ರೀಯತಾಮ್ ।

ಇತಿ ಈಶ್ವರಾರ್ಪಣಂ ಕೃತ್ವಾ ದ್ವಿರಾಚಮೇತ್ ವಿಷ್ಣೋ ವಿಷ್ಣೋ ವಿಷ್ಣೋ ಇತಿ ವಿಷ್ಣುಸ್ಮರಣಂ ಕುರ್ಯಾತ್ । ಇತಿ ಪ್ರಾತಃ ಸಂಧ್ಯಾವಂದನಮ್ ॥

(ಅಷ್ಟಾಕರೀ ಪಂಚಾಕ್ಷರೀ ಜಪ ವಿಧಾನಮ್ )

ಅಥ ಶಿಷ್ಟಾಚಾರ ಪ್ರಾಪ್ತಾಮಷ್ಟಾಕ್ಷರೀಂ ಪಂಚಾಕ್ಷರೀಂ ಚ ಜಪೇತ್ ।
ಅಥ ಅಷ್ಟಾಕ್ಷರೀ ಜಪಂ ಕರಿಷ್ಯೇ (ಇತಿ ಸಂಕಲ್ಪಃ)
ಆಚಮ್ಯ, ಸಾಧ್ಯಾ ನಾರಾಯಣ ಋಷಿಃ । ದೇವೀ ಗಾಯತ್ರೀಚ್ಛಂದಃ ।
ಪರಬ್ರಹ್ಮ ಪರಮಾತ್ಮಾದೇವತಾ ।

ಓಂ ಕ್ರುದ್ಧೋಲ್ಕಾಯ ಸ್ವಾಹಾ ಹೃದಯಾಯ ನಮಃ । ಮಹೋಲ್ಕಾಯ ಸ್ವಾಹಾ ಶಿರಸೇ ಸ್ವಾಹಾ ವೀರೋಲ್ಕಾಯ ಸ್ವಾಹಾ ಶಿಖಾಯೈವೌಷಟ್ । ದ್ಯುಲ್ಕಾಯ ಸ್ವಾಹಾ ಕವಚಾಯಹುಂ ಜ್ಞಾನೋಲ್ಕಾಯ ಸ್ವಾಹಾ ನೇತ್ರತ್ರಯಾಯವೌಷಟ್ । ಸಹಸ್ರೋಲ್ಕಾಯ ಸ್ವಾಹಾ ಅಸ್ತ್ರಾಯ ಫಟ್ ಧ್ಯಾನಮ್–

ಅರ್ಕೌಘಾಭಂ ಕಿರೀಟಾನ್ವಿತಮಕರಲಸತ್ಕುಂಡಲಂ ದೀಪ್ತಿರಾಜತ್ ।
ಕೇಯೂರಂ ಕೌಸ್ತುಭಾಭಂ ಶಬಲರುಚಿರಹಾರಂ ಸಪೀತಾಂಬರಂಚ ॥
ನಾನಾರತ್ನಾಂಶುಭಿನ್ನಾಭರಣಶತಯುತಂ ಶ್ರೀಧರಾಶ್ಲಿಷ್ಟಪಾರ್ಶ್ವಂ
ವಂದೇ ದೋಸ್ಸಕ್ತ ಚಕ್ರಾಂಬುರುಹದರಗದಂ ವಿಶ್ವವಂದ್ಯಂ ಮುಕುಂದಮ್

ಅಷ್ಟಾಕ್ಷರ್ಯಂಗದೇವತಾಃ ಪ್ರಧಾನದೇವತಾಃ ತಾಃ ಸರ್ವಾಃ ಸನ್ನಿಹಿತಾಃ ಸಂತುಃ ಅಷ್ಟಾಕ್ಷರೀ ಮಾವಾಹಯಾಮಿ ।

ಸಾಧ್ಯಾ ನಾರಾಯಣ ಋಷಿ । ದೇವೀ ಗಾಯತ್ರೀಚ್ಛಂದಃ । ಪರಮಾತ್ಮಾ ದೇವತಾ।

(ಮೂಲಮ್) ಓಂ ಓಂ ನಮೋ ನಾರಾಯಣಾಯ (ಗಾಯತ್ರೀಜಪಾದ್ ದ್ವಿಗುಣಮಷ್ಟಾಕ್ಷರೀಂ ಜಪೇತ್)

(ಜಪಾನಂತರಂ ಪುನಃ ಷಡಂಗನ್ಯಾಸಃ )

ಇತ್ಯಷ್ಟಾಕ್ಷರೀಜಪಃ ॥

**ಅಥ ಪಂಚಾಕ್ಷರೀಜಪಂ ಕರಿಷ್ಯೇ (ಇತಿ ಸಂಕಲ್ಪಃ)**

ವಾಮದೇವ ಋಷಿಃ । ಪಂಕ್ತಿಶ್ಛಂದಃ । ಸದಾಶಿವರುದ್ರೋದೇವತಾ। ಓಂ ಹೃದಯಾಯ ನಮಃ ।

ನಂ ಶಿರಸೇ ಸ್ವಾಹಾ । ಮಂ ಶಿಖಾಯೈವೌಷಟ್ । ಶಿಂ ಕವಚಾಯಹುಂ। ವಾಂ ನೇತ್ರತ್ರಯಾಯ ವೌಷಟ್। ಯಂ ಅಸ್ತ್ರಾಯ ಫಟ್ ॥ ಧ್ಯಾನಮ್॥

ಭಿಬ್ರದ್ದೋರ್ಭಿಃ ಕುಠಾರಂ ಮೃಗಮಭಯವರೌ ಸುಪ್ರಸನ್ನೋಮಹೇಶಃ ।
ಸರ್ವಾಲಂಕಾರ ದೀಪ್ತಃ ಸರಸಿಜನಿಲಯೋ ವ್ಯಾಘ್ರಚರ್ಮಾತ್ತವಾಸಾಃ ।
ಧ್ಯೇಯೋ ಮುಕ್ತಾಪರಾಗಾಮೃತರಸಕಲಿತಾದ್ರಿಪ್ರಭಃ ಪಂಚವಕ್ತ್ರ
ಸ್ತ್ರ್ಯಕ್ಷಃ ಕೋಟೀರ ಕೋಟೀಘಟಿತತುಹಿನರೋಚಿಷ್ಕಲೋತ್ತುಂಗಮೌಲಿಃ ॥

ಪಂಚಾಕ್ಷರ್ಯಂಗ ದೇವತಾಃ ಪ್ರಧಾನ ದೇವತಾಃ ತಾಃ ಸರ್ವಾಃ ಸನ್ನಿಹಿತಾಃ ಸಂತು ಪಂಚಾಕ್ಷರೀ ಮಾವಾಹಯಾಮಿ ।

ವಾಮದೇವ ಋಷಿ। ಪಂಕ್ತಿಶ್ಛಂದಃ। ಸದಾಶಿವ ರುದ್ರೋ ದೇವತಾ।

(ಮೂಲಮ್) ಓಂ ನಮಃಶಿವಾಯ। (ಗಾಯತ್ರೀ ಜಪಾತ್ ಚತುರ್ಗುಣಂ ಪಂಚಾಕ್ಷರೀಂ ಜಪೇತ್)

ಅಷ್ಟಾಕ್ಷರೀ ಪಂಚಾಕ್ಷರೀ ಜಪಯಜ್ಞೇನ ಕರ್ಮಣಾ ಶ್ರೀ ಪರಮೇಶ್ವರಃ ಪ್ರೀಯಾತಾಮ್।

(ಅಶಕ್ತಃ ಕೇವಲಂ ಋಷಿ ಚ್ಛಂದೋ ದೇವತಾಃ ಉಚ್ಚಾರ್ಯ ಜಪಂ ಕುರ್ಯಾತ್)

**(ಅಥ ಮಧ್ಯಾಹ್ನ ಸಂಧ್ಯಾ)**

(ಸಂಕಲ್ಪಃ)

ಆಚಮ್ಯ ಪ್ರಾಣನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮೋಪಾತ್ತದುರಿತಕ್ಷಯದ್ವಾರಾ

ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಮಧ್ನಾಹ್ನ ಸಂಧ್ಯಾಮುಪಾಸಿಷ್ಯೇ।

(ಮಂತ್ರಾಚಮನಮ್)

ಓಂ ಆಪಃ ಪುನಂತು ಪೃಥಿವೀಂ ಪೃಥಿವೀ ಪೂತಾಪುನಾತು ಮಾಮ್। ಪುನಂತು ಬ್ರಹ್ಮಣಸ್ಪತಿಃ ಬ್ರಹ್ಮ ಪೂತಾ ಪುನಾತು ಮಾವಮ್। ಯದುಚ್ಛಿಷ್ಟಮಭೋಜ್ಯಂ ಯದ್ವಾದುಶ್ಚರಿತಂ ಮಮ। ಸರ್ವಂ ಪುನಂತು ಮಾಮಾಪೋಽ ಸತಾಂ ಚ ಪ್ರತಿಗ್ರಹಂ ಸ್ವಾಹಾ॥

(ಅರ್ಘ್ಯ ಪ್ರದಾನಮ್)

ಓಂ ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್।

ನೃಷದ್ವ ರಸದೃತ ಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್॥

ಸವಿತ್ರೇ ನಮಃ ಇದಮರ್ಘ್ಯಮ್

ಇತ್ಯೇಕಮರ್ಘ್ಯಂ ದದ್ಯಾತ್ ಅಥವಾ ಗಾಯತ್ರ್ಯಾ ತ್ರಿವಾರಂ ವಾ ದದ್ಯಾತ್, ಸಂಧ್ಯಾಕಾಲೋತೀತಶ್ಚೇತ್ ಪ್ರಾಯಶ್ಚಿತ್ತಾರ್ಥಂ ಗಾಯತ್ರ್ಯಾ ಏಕಮರ್ಘ್ಯಮ್ ದದ್ಯಾತ್ ॥

(ಉಪಸ್ಥಾನಮಂತ್ರಃ)

ಓಂ ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥

ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇವಿಶ್ವಾಯ ಸೂರ್ಯಮ್ ।

ಇತಿ ಮಧ್ಯಾಹ್ನಸಂಧ್ಯೋಪಾಸನಕರ್ಮಣಾ ಶ್ರೀಪರಮೇಶ್ವರಃ ಪ್ರೀಯತಾಮ್ ॥

। ಅಥ ಸಾಯಂ ಸಂಧ್ಯಾ ।

ಅಥ ಸಾಯಂ ಸಂಧ್ಯಾಯಾಂ ಅವಶಿಷ್ಟಂ ಸರ್ವಂ ಪ್ರಾತಃ ಸಂಧ್ಯಾ ವಂದನವತ್ ।

(ಸಂಕಲ್ಪ)

ಆಚಮ್ಯ ಪ್ರಾಣಾನಾಯಮ್ಯ । ದೇಶಕಾಲೌಸಂಕೀರ್ತ್ಯ । ಮಮೋಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ; ಸಾಯಂ ಸಂಧ್ಯಾಮುಪಾಸಿಷ್ಯೇ ॥

ಓಂ ಅಗ್ನಿಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಮ್ ।

ಯದಹ್ನಾ ಪಾಪಮಕಾರ್ಷಮ್ । ಮನಸಾ ವಾಚಾ ಹಸ್ತಾಭ್ಯಾಮ್ । ಪದ್ಭ್ಯಾಮುದರೇಣ ಶಿಶ್ನಾ । ಅಹಸ್ತದವಲುಂಪತು । ಯತ್ಕಿಂಚ ದುರಿತಂಮಯಿ । ಇದಮಹಂ ಮಾ ಮಮೃತ ಯೋನೌ ಸತ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥

(ಸಾಯಮುಪಸ್ಥಾನ ಮಂತ್ರಃ)

ಓಂ ಇಮಂ ಮೇ ವರುಣ ಶ್ರುಧೀ ಹವ ಮದ್ಯಾ ಚ ಮೃಡಯ। ತ್ವಾ ಮವಸ್ಯೂ ರಾಚಕೇ।

ಓಂ ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ।

ಅಹೇಡಮಾನೋ ವರುಣೇಹ ಬೋಧ್ಯುರುಶಂ ಸಮಾನ ಆಯುಃ ಪ್ರಮೋಷೀಃ ॥

(ಈಶ್ವರಾರ್ಪಣಮ್ )

ಇತಿ ಮಯಾ ಕೃತೇನ ಸಾಯಂ ಸಂಧ್ಯೋಪಾಸನಕರ್ಮಣಾ ಶ್ರೀ ಪರಮೇಶ್ವರಃ ಪ್ರೀಯತಾಮ್ ॥ ಅನ್ಯತ್ ಸರ್ವಂ ಪ್ರಾತಃ ಸಂಧ್ಯಾವತ್।

## ಅಥ ಬ್ರಹ್ಮಚಾರಿಣಾಮಗ್ನಿಕಾರ್ಯ ವಿಧಿಃ ।

ಅಥ ಬ್ರಹ್ಮಚಾರೀ ಸಂಧ್ಯಾವಂದನಾನಂತರಂ ಜಲಾಕ್ಷತಸಮಿತ್ಪಾಣಿಃ ಲೌಕಿಕಾಗ್ನಿ ಸಮೀಪಂಗತ್ವಾ ಸ್ವಾಸನೇ ಪ್ರಾಙ್ಮುಖಃ ಉಪವಿಶ್ಯ

ಓಂ ಉಪಾವರೋಹ ಜಾತವೇದಃ ಪುನಸ್ತ್ವಂ। ದೇವೇಭ್ಯೋ ಹವ್ಯಮಾವಹ ನಃ ಪ್ರಜಾನನ್ ।

ಆಯುಃ ಪ್ರಜಾಂ ರಯಿಮಸ್ಮಾಸು ಧೇಹಿ ಅಜಸ್ರೋ ದೀದಿಹಿ ನೋ ದುರೋಣೇ। ಓಂ ಭೂರ್ಭುವಸ್ಸುವರೋಮ್ ಅಗ್ನಿಂ ಪ್ರತಿಷ್ಠಾಪಯಾಮಿ ಇತ್ಯಾತ್ಮನಿ ಸಮಾರೋಪಿತಮಗ್ನಿಂ ಲೌಕಿಕಾಗ್ನೌ ಪ್ರತಿಷ್ಠಾಪ್ಯ ದ್ವಿರಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮೋಪಾತ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ ಪ್ರಾತರಗ್ನಿಕಾರ್ಯ ಹೋಮಂ ಕರಿಷ್ಯೇ ॥ ಇತಿ ಸಂಕಲ್ಪ್ಯ ಓಂ ಸ್ವಾಹಾ ಇತ್ಯೇಕಾಂ ಸಮಿಧಮಗ್ನೌ ಪ್ರಾಸ್ಯ, ಓಂ ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮ ಮೃಣನ್ನುಪಸ್ಪೃಶ । ದಿವ್ಯಂ ಸಾನ ಸ್ತೂಪೈ ಸಂ ರಶ್ಮಿಭಿಸ್ತತನಃ ಸೂರ್ಯಸ್ಯ । ಇತ್ಯುಪಸ್ಥಾಯ ಅಥಾಗ್ನಿಂ ಪರಿಷಿಂಚತಿ। ಅದಿತೇಽನುಮನ್ಯಸ್ವ। ಇತಿ ದಕ್ಷಿಣತಃ ಪ್ರಾಚೀನಮ್ ಅನುಮತೇಽನುಮನ್ಯಸ್ವ । ಇತಿ ಪಶ್ಚಾದುದೀಚೀನಮ್। ಸರಸ್ವತೇಽನು ಮನ್ಯಸ್ವ (ಇತ್ಯುತ್ತರತಃ ಪ್ರಾಚೀನಮ್) ದೇವ ಸವಿತಃ ಪ್ರಸುವ। ಇತಿ ಪ್ರಾಗಾದಿ ಸಮಂತಾತ್ಪ್ರದಕ್ಷಿಣ ಮಗ್ನಿಂ ಪರಿಷಿಚ್ಯ, ಓಂ ಅಗ್ನಯೇ ನಮಃ । ಓಂ ಜಾತವೇದಸೇ ನಮಃ । ಓಂ ಸಹೋಜಸೇ ನಮಃ । ಓಂ ಅಜಿರಾ ಪ್ರಭವೇ ನಮಃ। ಓಂ ವೈಶ್ವಾನರಾಯ ನಮಃ। ಓಂ ನರ್ಯಾಪಸೇ ನಮಃ । ಓಂ ಪಂಕ್ತಿರಾಧಸೇ ನಮಃ । ಓಂ ವಿಸರ್ಪಿಣೇ ನಮಃ । ಇತ್ಯಗ್ನಿಂ ಪರಿತಃ ಪ್ರಾಗಾದ್ಯಷ್ಟದಿಕ್ಷು ಗಂಧಾದಿಭಿರಲಂ ಕೃತ್ಯ, ಮಧ್ಯೇ, ಶ್ರೀ ಯಜ್ಞ ಪುರುಷಾಯ ನಮಃ। ಗಂಧಪುಷ್ಪಾಕ್ಷತಾನ್ ಸಮರ್ಪಯಾಮಿ ॥

ಅಗ್ನಿಂ ಪ್ರಜ್ವಲಿತಂ ವಂದೇ । ಜಾತವೇದಂ ಹುತಾಶನಂ । ಸುವರ್ಣವರ್ಣ ಮಮಲಂ ಸಮಿದ್ಧಂ ವಿಶ್ವಾತೋಮುಖಂ। ಇತ್ಯಗ್ನಿಂ ಧ್ಯಾತ್ವಾ ।ಓಂ ಭೂಃ ಸ್ವಾಹಾ। ಅಗ್ನಯ ಇದಂ ನ ಮಮ। ಓಂ ಭುವಃ ಸ್ವಾಹಾ। ವಾಯವ ಇದಂ ನ ಮಮ। ಓಂ ಸುವಃ ಸ್ವಾಹಾ। ಸೂರ್ಯಾಯೇದಂ ನ ಮಮ। ಓಂ ಭೂರ್ಭುವಸ್ಸುವಃ ಸ್ವಾಹಾ । ಪ್ರಜಾಪತಯ ಇದಂ ನ ಮಮ। ಇತ್ಯಾಜ್ಯಾಕ್ತಾಃ ಸಮಿಧಃ ಪ್ರತಿಮಂತ್ರಂ ಹುತ್ವಾ । ಓಂ ಸ್ವಾಹಾ। ಇತ್ಯೇಕಾಂ ಸಮಿಧ ಮಗ್ನೌ ನಿಧಾಯ–ಓಂ ಜುಪಸ್ವನಃ। ಸೂರ್ಯಸ್ಯ ಓಂ ಆದಿತೇನ್ವಮಂಸ್ಥಾಃ। ಅನುಮತೇ ನ್ವಮಂಸ್ಥಾ। ಸರಸ್ವತೇ ನ್ವಮಂಸ್ಥಾಃ। ದೇವ ಸವಿತಃ ಪ್ರಾಸಾವೀಃ ಇತಿ ಪೂರ್ವವತ್ ಪರಿಷಿಚ್ಯ ಅಥೋತ್ಥಾಯೋಪತಿಷ್ಠತೇ ಓಂ

ಯತ್ತೇ ಅಗ್ನೇ ತೇಜಸ್ತೇನಾಹಂ ತೇಜಸ್ವೀ ಭೂಯಾಸಂ। ಯತ್ತೇ ಅಗ್ನೇ ವರ್ಚಸ್ತೇನಾಹಂ ವರ್ಚಸ್ವೀ ಭೂಯಾಸಂ। ಯತ್ತೇ ಅಗ್ನೆ ಹರಸ್ತೇ ನಾಹಂ ಹರಸ್ವೀ ಭೂ ಯಾಸಂ। ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿ ಸ್ತೇಜೋ ದಧಾತು। ಮಯಿಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು। ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯ ದಧಾತು। ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋಭ್ರಾಜೋದಧಾತು। ಇತ್ಯುಪಸ್ಥಾಯ, ಉಪವಿಶ್ಯ ಓಂ ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋ ಗೋಷುಮಾನೋ ಅಶ್ವೇಷು ರೀರಿಷಃ। ವೀರಾನ್ಮಾನೋ ರುದ್ರ ಭಾಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮತೇ। ಇತ್ಯನಾಮಿಕಯಾ, ಪ್ರಾಗ್ವಾ ಉದಗ್ವಾ, ಹುತಭಸ್ಮ ಗೃಹಿತ್ವಾ। ''ಓಜೋಽಸಿ'' ಇತಿ ಲಲಾಟೇ, ''ಸಹೋಽಸಿ'' ಇತಿ ಕಂಠೇ ''ಬಲಮಸಿ'' ಇತಿ ದಕ್ಷಿಣ ಬಾಹುಮೂಲೆ, ''ಭ್ರಾಜೋಽಸಿ'' ಇತಿ ಕಂಠಪೃಷ್ಠೇ ''ದೇವಾನಾಂ ಧಾಮ ನಾಮಾಸಿ'' ಇತಿ ನಾಭೌ ''ವಿಶ್ವಮಸಿ ವಿಶ್ವಾಯುಃ'' ಇತಿ ಹೃದಯೇ, ''ಸರ್ವಮಸಿ ಸರ್ವಾಯು ರಭಿಭೂರೋಂ'' ಇತಿ ಶಿರಸಿ। ಏವಂ ಧೃತ್ವಾ। ಕರಂ ಪ್ರಕ್ಷಾಲ್ಯ ನಾಮ ಗೋತ್ರಾದ್ಯೈರಭಿವಾದ್ಯ ಶ್ರದ್ಧಾಂ ಮೇದಾಂ ಯಶಃ ಪ್ರಜ್ಞಾಂ ವಿದ್ಯಾಂಬುದ್ಧಿಂ ಶ್ರೀಯಂ ಬಲಂ ಆಯುಷ್ಯಂ ತೇಜ ಆರೋಗ್ಯಮ್ ದೇಹಿ ಮೇ ಹವ್ಯವಾಹನ॥ ಇತಿ ಪ್ರಾರ್ಥ್ಯ॥ ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞ ಕ್ರಿಯಾದಿಷು। ನೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್। ಅನೇನ ಪ್ರಾತರಗ್ನಿಕಾರ್ಯ ಕರ್ಮಣಾ (ಸಾಯಂ ಚೇತ್ ಸಾಯಮಗ್ನಿಕಾರ್ಯ ಕರ್ಮಣಾ) ಶ್ರೀ ಪರಮೇಶ್ವರಃ ಪ್ರೀಯತಾಮ್॥ ಓಂ ತತ್‌ಸತ್ ಅಸ್ಮಿನ್ ಹೋಮ ಕಾಲೇ ಸ್ವರವರ್ಣಮಂತ್ರ ತಂತ್ರ ನ್ಯೂನಾತಿರೇಕ ದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಜಪಂ ಕರಿಷ್ಯೇ। ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ॥

ಓಂ ಯಾತೇ ಆಗ್ನೇ ಯಜ್ಞಯಾ ತನೂಸ್ತಯೇದ್ಯಾರೋಹಾತ್ಮಾತ್ಮಾನಂ॥ ಆಚ್ಛಾ ವಸೂನಿ ಕೃಣ್ವನ್ನಸ್ಮೇ ನರ್ಯಾಪುರೂಣಿ। ಯಜ್ಞೋ ಭೂತ್ವಾ ಯಜ್ಞಮಾಸೀದ ಸ್ವಾಂ ಯೋನಿಂ। ಜಾತವೇದೋಭುವ ಅಜಾಯಮಾನಃ ಸಕ್ಷಯಏಹಿ। ಇತಿ ದಕ್ಷಿಣ ಪಾಣಿಂ ನಿಕ್ಷಿಪ್ಯ ದಕ್ಷಿಣ ನಾಸಾಮಾರ್ಗೇಣ ಆತ್ಮನಿ ಸಮಾರೋಪಯೇತ್। ಆಚಮ್ಯ, ವಿಷ್ಣು ಸ್ಮರಣಂ ಕುರ್ಯಾತ್। ಏವಂ ಸಾಯಮಗ್ನಿ ಕಾರ್ಯಂ ಕುರ್ಯಾತ್॥

ಇತ್ಯಗ್ನಿಕಾರ್ಯಹೋಮವಿಧಿಃ

***

# ನಿತ್ಯದೇವತಾ ಪೂಜಾಕ್ರಮ

1. ಈ ಪೂಜಾಕ್ರಮವು ಎಲ್ಲರೂ ಮಾಡಬಹುದಾದ ಸರಳ ವಿಧಾನ. ಅಥಷೋಡಶೋಪಚಾರ ಪೂಜಾ ಎಂಬುದರಿಂದ ಮುಂದೆ ಸುಲಭವಾದ ಮಂತ್ರಗಳನ್ನೂ, ಶ್ಲೋಕಗಳನ್ನೂ ಬಳಸಿದೆ. ಅವನ್ನೂ ಹೇಳಲಾಗದವರು ಶ್ರೀ ರುದ್ರ.... ವಿಷ್ಣವೇ ನಮಃ ಎಂದು ಮಾತ್ರ ಹೇಳುತ್ತ ಅವಾಹಯಾಮಿ, ಆಸನಂ ಸಮರ್ಪಯಾಮಿ– ಇತ್ಯಾದಿ ವಾಕ್ಯಗಳನ್ನುಚ್ಚರಿಸಿ ಪೂಜೆ ಮಾಡತಕ್ಕದ್ದು.

2. ಇದೂ ಸಾಧ್ಯಾವಾಗದಿದ್ದಲ್ಲಿ, ದೇವರಿಗೆ ದೀಪಹಚ್ಚಿ, ನಿರ್ಮಾಲ್ಯವನ್ನು ತೆಗೆದುಹಾಕಿ, ಹೂಗಳಿಂದ ಅಲಂಕರಿಸಿ, ಧೂಪವನ್ನು ತೋರಿಸಿ ದೇವರ ನಾಮವನ್ನು ಉಚ್ಚರಿಸುತ್ತ ದಂಡವತ್ ಪ್ರಣಾಮವನ್ನು ಮಾಡಬೇಕು.

3. ಜಲ ಪುಷ್ಪ ಗಂಧಾದಿ ಸಾಮಗ್ರಿಗಳು ದೊರೆಯದಿದ್ದಲ್ಲಿ, ನಿಶ್ಚಲವಾಗಿ ಕುಳಿತು ಮೇಲ್ಕಂಡ ಪೂಜಾ ಮಂತ್ರಗಳನ್ನು ಕ್ರಮವಾಗಿ ಸ್ಮರಿಸಿಕೊಳ್ಳಬೇಕು. ಇದು ಮಾನಸ ಪೂಜೆ.

4. ಕಾರ್ಯವಶದಿಂದ ಇದಾವುದೂ ಅಶಕ್ಯವೆನಿಸಿದಲ್ಲಿ, ದೇವರಿಗೆ ದಂಡವತ್ ಪ್ರಣಾಮವನ್ನು ಮಾಡಲೇಬೇಕು. ಇದಕ್ಕೆ ವಿನಾಯಿತಿ ಇಲ್ಲ.

5. ಶ್ರೀರುದ್ರ ವಿನಾಯಕ, ಸೂರ್ಯ, ಶಕ್ತಿ(ಅಂಬಿಕಾ) ವಿಷ್ಣು– ಇವರು ಪಂಚಾಯತನ ದೇವತೆಗಳು. ಒಂದೊಂದು ಮನೆತನದಲ್ಲಿ ಈ ದೇವತೆಗಳ ಸ್ಥಾಪನಾ ಕ್ರಮವು ಬೇರೆ ಬೇರೆ ಇರಬಹುದು. ಯಾವ ಪಂಚಾಯತನವಿದ್ದರೂ ಶ್ರೀ ರುದ್ರ ವಿನಾಯಕ ಸೂರ್ಯ ಶಕ್ತಿ ಮಹಾವಿಷ್ಣೂನುದ್ದಿಶ್ಯ,– – ಮಹಾವಿಷ್ಣುಭ್ಯೋ ನಮಃ ಎಂದು ಆಯಾ ಸಂದರ್ಭದಲ್ಲಿ ಹೇಳಬಹುದು. ಆಗ ಪರಿವೃತ ಎಂಬ ಶಬ್ದವನ್ನು ಮಾತ್ರ ಬಿಡಬೇಕಾಗುತ್ತದೆ.

6. ಪೂಜಾರಂಭದಲ್ಲಿ ಘಂಟೆಯನ್ನರ್ಚಿಸಿ ಘಂಟಾನಾದವನ್ನು ಮಾಡತಕ್ಕದ್ದು. ಇದನ್ನು ಪೂಜಾವಿಧಿಯಲ್ಲಿಯೇ ಸೂಚಿಸಿದೆ. ಅನಂತರ ದೇವತಾ ಸ್ನಾನ, ಧೂಪ, ದೀಪ,ಮಂಗಳ ನೀರಾಜನಗಳ ವೇಳೆಯಲ್ಲಿಯೂ ಘಂಟಾನಾದವನ್ನು ಮಾಡತಕ್ಕದ್ದು. ಸ್ನಾನ, ವಸ್ತ್ರ, ನೈವೇದ್ಯಗಳನ್ನು ಅರ್ಪಿಸಿದಾಗ ಪ್ರತಿಸಲವೂ ಆಚಮನಂ ಸಮರ್ಪಯಾಮಿ ಎಂದು ನೀರನ್ನು ಬಿಡುವುದು ಅವಶ್ಯಕ.

7. ಪೂಜೆಯಾದ ಮೇಲೆ ಶಂಖದಲ್ಲಿದ್ದ ಜಲವನ್ನು ಪೂರ್ತಿಯಾಗಿ ಜಲಪಾತ್ರಗೆ ಸುರಿದು ಕೆಳಮುಖವಾಗಿ ಶಂಖವನ್ನು ಸಂಪುಟದಲ್ಲಿಡಬೇಕು.

8. ಷೋಡಶೋಪಚಾರಗಳು :

ಧ್ಯಾನ, ಅವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಉಪವೀತ, ಗಂಧ–ಅಕ್ಷತೆ, ಪುಷ್ಪ, ಧೂಪ ದೀಪ ನೈವೇದ್ಯ, ನೀರಾಜನ, ಪ್ರದಕ್ಷಿಣನಮಸ್ಕಾರ ಇವುಗಳಿಂದ ಅರ್ಚಿಸುವುದನ್ನು ಷೋಡಶೋಪಚಾರ ಪೂಜೆ ಎನ್ನುತ್ತಾರೆ. ಇದರಲ್ಲಿಸ್ವಲ್ಪ ಮತಭೇದವೂ ಉಂಟು. ಆಚಮನವಾದ ಮೇಲೆ ಮಧುಪರ್ಕ, ಗಂಧವಾದ ಮೇಲೆ ಆಭರಣಗಳ ಸಮರ್ಪಣೆ ಇದೆ. ಸ್ತ್ರೀ ದೇವತೆಗೆ ಹರಿದ್ರಾ– ಕುಂಕುಮಗಳ ಅರ್ಪಣೆಯನ್ನು ಗಂಧದ ಬದಲಿಗೆ ಮಾಡುವುದುಂಟು.

ಇವಿಷ್ಟು ನಿತ್ಯಪೂಜೆಯಲ್ಲಿಯೂ ವಿಶೇಷ ದಿನಗಳ ಪೂಜೆಯಲ್ಲಿಯೂ ಉಂಟು. ಪುಷ್ಪ– ಮಾಲೆಗಳ ಅರ್ಪಣೆಯಾದ ಮೇಲೆ ಯಥಾಶಕ್ತಿಯಾಗಿ ಸಹಸ್ರನಾಮ, ಅಷ್ಟೋತ್ತರನಾಮ, ದ್ವಾದಶನಾಮಗಳಿಂದ ಪೂಜಿಸಬಹುದು.

## ನಿತ್ಯ ದೇವತಾರ್ಚನಮ್

ಸಂಧ್ಯಾವಂದನಾದಿಕಂ ಕೃತ್ವಾ ದೇವಸ್ಯ ದಕ್ಷಿಣಭಾಗೇ ಉಪವಿಶ್ಯ । ಆಚಮ್ಯ । ಓಂ ಫಟ್ ಇತಿ ಘಂಟಾಂ ಸಂಪೂಜ್ಯವಾದಯೇತ್ ।ಅಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ । ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಂ। ಇತಿ ಘಂಟಾನಾದಂ ಕೃತ್ವಾ। ದೇಹೋ ದೇವಾಲಯಃ ಪ್ರೋಕ್ತೋ ದೇವೋ ಜೀವಃ ಸದಾಶಿವಃ । ತ್ಯಜೇದಜ್ಞಾನನಿರ್ಮಾಲ್ಯಂ ಸೋಽಹಂಭಾವೇನ ಪೂಜಯೇತ್ । ಇತಿ ಧ್ಯಾತ್ವಾ । ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ಚಕ್ಷುರುನ್ಮೀಲಿತಂಯೇನ ತಸ್ಮೈ ಶ್ರೀ ಗುರವೇ ನಮಃ ॥ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜನಂ । ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪ ಶಾಂತಯೇ। ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ । ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ।

ಅಥ ಮಂಟಪಂ ಧ್ಯಾತ್ವಾ। ದ್ವಾರಪಾಲಾದಿ ದೇವತಾಭ್ಯೋ ನಮಃ ಇತ್ಯಭ್ಯರ್ಚ್ಯ। ಸರ್ವೇಭ್ಯೋ ದೇವೇಭ್ಯೋ ನಮಃ । ಸರ್ವಾಭ್ಯೋ ದೇವತಾಭ್ಯೋ ನಮಃ । ಆಚಾರ್ಯೆಭ್ಯೋ ನಮಃ । ಸುಮುಹೂರ್ತಮಸ್ತು। ಇತಿ ಪ್ರಾರ್ಥಯೇತ್ ।

ಅಥ ದ್ವಿರಾಚಮ್ಯ ಪ್ರಾಣಾನಾಯಮ್ಯ । ವಿಷ್ಣೋ ವಿಷ್ಣೋ ವಿಷ್ಣೋ । ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀ ಹರೇಃ ಶ್ವೇತ ವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತಖಂಡೇ ಭಾರತವರ್ಷೇ ಶ್ರೀ ಶಾಲಿವಾಹನ ಶಕಾಬ್ದೇ ಅದ್ಯ ಪ್ರವರ್ತಮಾನಸ್ಯ ---- ಸಂವತ್ಸರಸ್ಯ ---- ಅಯನೇ, -- ಋತೌ, -- ಮಾಸೇ, --- ಪಕ್ಷೇ --- ವಾಸರೇ --- ಏವಂಗುಣ ವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸುಕುಟುಂಬಾನಾಂ ಧರ್ಮಾರ್ಥಕಾಮ ಮೋಕ್ಷ ಚತುರ್ವಿಧ ಪುರುಷಾರ್ಥ ಫಲಸಿದ್ಧ್ಯರ್ಥಂ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಶ್ರೀ ರುದ್ರ ವಿನಾಯಕ ಸೂರ್ಯ ಶಕ್ತಿ ಪರಿವೃತ ಶ್ರೀ ಮಹಾವಿಷ್ಣೋ ಮುದ್ದಿಶ್ಯ। ಯಥಾಶಕ್ತಿ ಧ್ಯಾನಾವಾಹನಾದಿ ಷೋಡಷೋಪಚಾರ ಪೂಜಾಂ ಕರಿಷ್ಯೇ ಜಲಂ ವಿಸೃಜ್ಯ । ಕಲಶಪೂಜಾಂ ಕುರ್ಯಾತ್। ದೇವಸ್ಯ ದಕ್ಷಿಣ ಭಾಗೇ ಜಲಕಲಶಂ ನಿಧಾಯ ಕಲಶಂ ಸ್ಪೃಷ್ಟ್ವಾ ಜಪೇತ್। ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ। ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸಂನಿಧಿಂ ಕುರು। ಕಲಶದೇವತಾಭ್ಯೋ ನಮಃ । ಗಂಧಪುಷ್ಪಾಕ್ಷತಾನ್ ಸಮರ್ಪಯಾಮಿ ॥ ಅಥ ಶಂಖಪೂಜಾ। ಯಂ ಅಸ್ತ್ರಾಯ ಫಟ್ – ಇತಿ ಶಂಖಂ ಪ್ರಕ್ಷಾಲ್ಯ । ಆಧಾರೇ ಶಂಖಂ ನಿಧಾಯ । ಓಮಿತಿ ಜಲಮಾಪೂರ್ಯ । ಗಂಧಪುಷ್ಪಾದಿಭಿರಭ್ಯರ್ಚ್ಯ ಜಪೇತ್ । ಪಾಂಚಜನ್ಯಾಯ ವಿದ್ಮಹೇ ಪದ್ಮಗರ್ಭಾಯ ಧೀಮಹಿ । ತನ್ನಃ ಶಂಖಃ ಪ್ರಚೋದಯಾತ್ – ಇತಿ ಶಂಖೋದಕಂ ಕಲಶೇ ಕಿಂಚನ್ನಿಕ್ಷಿಪ್ಯ ದೇವಸ್ಯ ಮೂರ್ಧ್ನಿ ತ್ರಿಃ ಪ್ರೋಕ್ಷ್ಯ ಆತ್ಮಾನಂ ಪೂಜೋಪಕರಣಾನಿ ಚ ಪ್ರೋಕ್ಷಯೇತ್ । ಶೇಷಂ ಜಲಂ ವಿಸೃಜ್ಯ । ಓಮಿತಿ ಜಲಂ ಪುನರಾಪೂರ್ಯ ದೇವಸ್ಯ ಸಮೀಪೇ ಸ್ಥಾಪಯೇತ್ । ಅಥ ಆತ್ಮಾರ್ಚನಂ ಓಮಾತ್ಮನೇ ನಮಃ ಇತಿ ಪುಷ್ಪಂ ಸ್ವಶಿರಸಿ ನಿಧಾಯ ವಿಸೃಜ್ಯ ಹಸ್ತಂ ಪ್ರಕ್ಷಾಲಯೇತ್.

ಅಥ ಷೋಡಶೋಪಚಾರಪೂಜಾ । ಸ್ವಾತ್ಮಸಂಸ್ಥಮಜಂ ಶುದ್ಧಂ ತ್ವಾಮದ್ಯ ಪುರುಷೋತ್ತಮ । ಅರಣ್ಯಾಮಿವ ಹವ್ಯಾಶಂ ಮೂರ್ತಾವಾವಾಹಯಾಮ್ಯ ಹಂ ।

ಶ್ರೀ ರುದ್ರ ವಿನಾಯಕ ಸೂರ್ಯ ಶಕ್ತಿ ಪರಿವೃತ ಶ್ರೀ ಮಹಾವಿಷ್ಣವೇ ನಮಃ । ಸಂನಿಹಿತೋ ಭವ ।

ಆವಾಹಯಾಮಿ। ಸುವರ್ಣರತ್ನ ಸಂಯುಕ್ತಂ ಶತಸೂರ್ಯ ಸಮಪ್ರಭಂ। ರಚಿತಂ ಮೌಕ್ತಿಕೈರ್ದಿವ್ಯೈ ಗೃಹ್ಯತಾಮುತ್ತಮಾನಸಂ । ಶ್ರೀ ರುದ್ರ ... ವಿಷ್ಣವೇ ನಮಃ । ಆಸನಂ ಸಮರ್ಪಯಾಮಿ। ಗಂಗಾದಿಸರ್ವತೀರ್ಥೇಭ್ಯೋ ಮಯಾಪ್ರಾರ್ಥನಯಾಹೃತಂ । ತೋಯಮೇತತ್ ಸುಖಸ್ಪರ್ಶಂ ಪಾದ್ಯಾರ್ಥಂ ಪ್ರತಿಗೃಹ್ಯತಾಂ । ಶ್ರೀ ರುದ್ರ --- ವಿಷ್ಣವೇ ನಮಃ । ಪಾದ್ಯಂ ಸಮರ್ಪಯಾಮಿ।ಗಂಧಪುಷ್ಪಾಕ್ಷತೋಪೇತಂ ಪರಿಪೂರ್ಣ ಪರಾತ್ಪರ । ಹೇಮಪಾತ್ರಸ್ಥಿರಂ ತೋಯಂ ಗೃಹಾಣಾರ್ಘಂ ನಮೋ ಸ್ತುತೇ । ಶ್ರೀ ರುದ್ರ ... ವಿಷ್ಣವೇ ನಮಃ। ಆಚಮನೀಯಂ ಸಮರ್ಪಯಾಮಿ। ಅಥ ಮಲಾಪಕರ್ಷಣಸ್ನಾನಂ ಕಾರಯಿಷ್ಯೇ (1)

ಅಪೋಹಿಷ್ಠಾ ಮಯೋಭವಃ । ತಾನ ಊರ್ಜೇ ದದಾತನ ಮಹೇರಣಾಯ ಚಕ್ಷಸೇ ಯೋವಃ ಶಿವತಮೋ ರಸಃ । ತಸ್ಯ ಭಾಜಯತೇಹನಃ । ಉಶತೀರಿವ ಮಾತರಃ। ತಸ್ಮಾ ಅರಂಗಮಾಮವಃ । ಯಸ್ಯಕ್ಷಯಾಯ ಜಿನ್ವಥ । ಆಪೋ ಜನಯಥಾಚನಃ। ಇತಿ ಮಲಾಪಕರ್ಷಸ್ನಾನಂ ಸಮರ್ಪಯಾಮಿ।। ಅಥ ಅಭಿಷೇಕಃ। ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋತಾಯ ವೈ ನಮೋ ನಮಃ । ಭವೇ ಭವೇ

---

(1) ದೇವರ ಪಟ ಮತ್ತು ಪುಸ್ತಕಗಳಿಗೆ ಜಲದಿಂದ ಪ್ರೋಕ್ಷಿಸುವುದು ಮಾತ್ರ. ಸಾಲಿಗ್ರಾಮ, ಈಶ್ವರ ಲಿಂಗ – ಮುಂತಾದ ಶಿಲಾಮಯ ಮೂರ್ತಿಗಳನ್ನು ಅಭಿಷೇಕ ಪಾತ್ರೆಯಲ್ಲಿಟ್ಟುಕೊಂಡು ನಿತ್ಯವೂ ಅಭಿಷೇಕ ಮಾಡತಕ್ಕದ್ದು. ಲೋಹನಿರ್ಮಿತ ವಿಗ್ರಹಗಳಿಗೆ ಮತ್ತು ಯಂತ್ರಗಳಿಗೆ ನಿತ್ಯವೂ ಅಭಿಷೇಕವಿಲ್ಲ, ಅವುಗಳಿಗೆ ಅಮಾವಸ್ಯೆ, ಸಂಕ್ರಾಂತಿ, ಯುಗಾದಿ – ಮುಂತಾದ ವಿಶೇಷ ದಿನಗಳಲ್ಲಿ ಅಭಿಷೇಕ ಉಂಟು. ಉಳಿದ ದಿನಗಳಲ್ಲಿ ಜಲದಿಂದ ಪ್ರೋಕ್ಷಿಸಬೇಕು. ಮಲಾಪಕರ್ಷಣಸ್ನಾನವಾದ ಮೇಲೆ ಪಂಚಾಮೃತದಿಂದಲೂ ಶ್ರೀ ಗಣೇಶಾಥರ್ವಶೀರ್ಷ ರುದ್ರ – ಚಮಕ, ಪುರುಷ ಸೂಕ್ತ, ಶ್ರೀ ಸೂಕ್ತ, ದುರ್ಗಾಸೂಕ್ತಗಳಿಂದಲೂ ವಿಶೇಷ ದಿನಗಳಲ್ಲಿ ಅಭಿಷೇಕ ಮಾಡುವುದು ಉತ್ತಮ.

ನಾತಿಭವೇ ಭವಸ್ವಮಾಂ ಭವೋದ್ಭವಾಯ ನಮಃ। ವಾಮದೇವಾಯ ನಮೋ ಜೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಥನಾಯ ನಮಃ ॥ ಓಂ ಅಘೋರೇ ಭ್ಯೋ ಥ ಘೋರೇಭ್ಯೋ ಘೋರಘೋರತರೇಭ್ಯಃ। ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ– ಅಸ್ತು ರುದ್ರರೂಪೇಭ್ಯಃ॥ ತತ್ಪರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ। ತನ್ನೋ ರುದ್ರಃ ಪ್ರಚೋದಯಾತ್ । ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋऽಧಿಪತಿ ಬ್ರಹ್ಮಾಶಿವೋ ಮೇ ಅಸ್ತು ಸದಾಶಿವೋಮ್ (2) ಶ್ರೀ ರುದ್ರ..... ವಿಷ್ಣವೇ ನಮಃ। ಅಭಿಷೇಕ ಸ್ನಾನಂ ಸಮರ್ಪಯಾಮಿ। ಇಷ್ಟನ್ನು ಹೇಳಲಾಗದಿದ್ದರೆ ಓಂ ನಮಃ ಶಿವಾಯ, ಓಂ ನಮೋ ನಾರಾಯಣಾಯ ಎಂದು ಹೇಳುತ್ತ ಅಭಿಷೇಕ ಮಾಡತಕ್ಕದು. ಅಥ ಅಭಿಷಿಕ್ತ ದೇವತಾಃ ಶುದ್ಧವಸ್ತ್ರೇಣ ಉದ್ವರ್ತ್ಯ ಪೀಠೇ ಸ್ಥಾಪಯೇತ್। ಶ್ರೀರುದ್ರ.... ವಿಷ್ಣವೇ ನಮಃ ಶುದ್ಧಾಚಮನಂ ಸಮರ್ಪಯಾಮಿ। ನಾನಾವರ್ಣ ವಿಚಿತ್ರಾಢ್ಯಂ ಮೃದುಲಂಚ ಮನೋಹರಂ। ವಸ್ತ್ರಂ ಗೃಹಾಣ ಕೌಶೇಯಮುಪವಸ್ತ್ರ ಸಮನ್ವಿತಂ। ಶ್ರೀರುದ್ರ..... ವಿಷ್ಣವೇನಮಃ। ವಸ್ತ್ರಯುಗ್ಮಸಮರ್ಪಯಾಮಿ। ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್। ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ। ಶ್ರೀರುದ್ರ..... ವಿಷ್ಣವೇ ನಮಃ। ಯಜ್ಞೋಪವೀತಂ ಸಮರ್ಪಯಾಮಿ। ಆಚಮನಂ ಸಮರ್ಪಯಾಮಿ। ಇದಂ ಚ ಹೇಮಾಭರಣಂ ಮುಕ್ತಾವಿದ್ರುಮ ಭೂಷಿತಂ। ಭಕ್ತ್ಯಾ ದತ್ತಂ ಮಯಾ ತುಭ್ಯಂ ಸ್ವೀಕೃತ್ಯಾಲಂಕುರು ಪ್ರಭೋ। ಶ್ರೀರುದ್ರ.... ವಿಷ್ಣವೇ ನಮಃ । ಸ್ವರ್ಣಾಭರಣಂ ಸಮರ್ಪಯಾಮಿ । ರೋಚನಾಗರು ಕರ್ಪೂರಕಸ್ತೂರಿಕುಂಕುಮಾನ್ವಿತಂ। ಮಲಯಾಚಲಸಂಭೂತಂ ಚಂದನಂ ಪ್ರತಿಗೃಹ್ಯತಾಂ। ಶ್ರೀರುದ್ರ.... ವಿಷ್ಣವೇ ನಮಃ। ಗಂಧಂ ಸಮರ್ಪಯಾಮಿ। ಗಂಧಸ್ಯೋಪರಿ ಅಲಂಕರಣಾರ್ಥಮಕ್ಷತಾನ್ ಧಾರಯಾಮಿ। ಸುಗಂಧೀನಿ ವಿಚಿತ್ರಾಣಿ ಮಾಲತ್ಯಾದೀನಿ ಸಂಪ್ರತಿ। ಸಂಪಾದಿತಾನಿ ರಮ್ಯಾಣಿ ಪುಷ್ಪಾಣಿ ಸ್ವೀಕರುಷ್ವ ಭೋಃ। ಶ್ರೀರುದ್ರ..... ವಿಷ್ಣವೇ ನಮಃ। ಪುಷ್ಪಾಣಿ ಸಮರ್ಪಯಾಮಿ। (ಅತ್ರ ಸಹಸ್ರನಾಮ– ಅಷ್ಟೋತ್ತರ ಶತನಾಮ– ದ್ವಾದಶನಾಮಭಿಃ ಯಥಾಶಕ್ತಿ

ಪೂಜಯೇತ್) ವನಸ್ಪತಿರಸೋತ್ಪನ್ನೋ ಗಂಧಾಢ್ಯೋ ಧೂಪ ಉತ್ತಮಃ। ಆಘ್ರೇಯಃ ಸರ್ವ ದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ। ಶ್ರೀರುದ್ರ.... ವಿಷ್ಣವೇ ನಮಃ। ಧೂಪಮಾಘ್ರಾಪಯಾಮಿ। ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ಗೃಹಾಣ ಮಂಗಲಂ ದೀಪಂ ತ್ರೈಲೋಕ್ಯತಿಮಿರಾಪಹ। ಶ್ರೀರುದ್ರ..... ವಿಷ್ಣವೇ ನಮಃ। (ಸಂಘಂಟಾವಾದನಂ) ದೀಪಂ ದರ್ಶಯಾಮಿ। ಅಗ್ರೇ ಚತುರಸ್ರಮಂಡಲಂ ಕೃತ್ವಾ। ನೈವೇದ್ಯಂ ನಿಧಾಯ। ಗಾಯತ್ರ್ಯಾ ಪ್ರೋಕ್ಷ್ಯ। ಓಂ ಭೂರ್ಭುವಸ್ಸುವರೋಂ। ಶ್ರೀರುದ್ರ..... ವಿಷ್ಣವೇ ನಮಃ। ಇದಮನ್ನಂ ಮಹಾಹವಿರ್ನೈವೇದ್ಯಂ (ನಾರಿಕೇಲ ಫಲಂ, ಕದಲೀ ಫಲಂ ನಾರಂಗ ಫಲಂ ಕ್ಷೀರಂ, ದಧಿ ಇತ್ಯಾದಿ) ನಿವೇದಯಾಮಿ...। ಇತಿ ತುಲಸೀದಲ ಸಹಿತೇನ ಜಲೇನ ನೈವೇದ್ಯಂಪರಿಷಿಚ್ಯ ತುಲಸೀದಲಂ ದೇವೇಭ್ಯಃ ಅರ್ಪಯೇತ್। ಅಮೃತೋಪಸ್ತರಣ ಮಸಿ ಸ್ವಾಹಾ। ಇತಿ ಕಿಂಚಿಜ್ಜಲಂ ವಿಸೃಜ್ಯ। ಓಂ ಪ್ರಾಣಾಯ ಸ್ವಾಹಾ। ಅಪಾನಾಯ ಸ್ವಾಹಾ। ವ್ಯಾನಾಯ ಸ್ವಾಹಾ। ಉದಾನಾಯ ಸ್ವಾಹಾ। ಸಮಾನಾಯ ಸ್ವಾಹಾ। ಇದಂ ನೈವೇದ್ಯಂಪರಿಗ್ರಹ್ಯತಾಂ। ಓಂ ಓಂ ಓಂ ತೃಪ್ತಿರಸ್ತು। ಅಮೃತಾಪಿಧಾನಮಸಿ ಸ್ವಾಹಾ। ಇತಿ ಕಿಂಚಿಜ್ಜಲಂ ವಿಸೃಜ್ಯ। ಪಾರ್ಶ್ವದೇವತಾಭ್ಯೋ ನಮಃ। ತೃಪ್ತಿರಸ್ತು ಇತಿ ಕಿಂಚಿದನ್ನಂ ಭೂವೌವಿಸೃಜ್ಯ। ಹಸ್ತಪ್ರಕ್ಷಾಲನಂ ಸಮರ್ಪಯಾಮಿ। ಶುದ್ಧಾಚಮನಂ ಸಮರ್ಪಯಾಮಿ। ಫಲಂ ಸಮರ್ಪಯಾಮಿ। ಪೂಗೀ ಫಲ ಸಮಾಯುಕ್ತಂ ನಾಗವಲ್ಲಿದಲೈರ್ಯುತಂ। ಕರ್ಪೂರಚೂರ್ಣ ಸಂಯುಕ್ತ ತಾಂಬೂಲಂ ಸಮರ್ಪಯಾಮಿ। ಅಥ ಮಂಗಲ ನೀರಾಜನಂ। ಓಂ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಹಸ್ತಉತ ವಿಶ್ವತಸ್ಪಾತ್। ಸಂ ಬಾಹುಭ್ಯಾಂ ನಮತಿ ಸಂಪತತ್ರೈರ್ದ್ಯಾವಾ ಪೃಥಿವೀ ಜನಯನ್ ದೇವ ಏಕಃ। (ಇತಿ ಸಘಂಟಾವಾದನಂ) ಶ್ರೀರುದ್ರ..... ವಿಷ್ಣವೇ ನಮಃ ಮಂಗಲ ನೀರಾಜನಂ ಸಮರ್ಪಯಾಮಿ। ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ। ತಸ್ಯ ಪ್ರಕೃತಿ ಲೀನಸ್ಯ ಯಃ ಪರಃ ಸ ಮಹೇಶ್ವರಃ। ಶ್ರೀರುದ್ರ.... ವಿಷ್ಣವೇ ನಮಃ ಮಂತ್ರಪುಷ್ಪಂ ಸಮರ್ಪಯಾಮಿ। ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿ ಶಿರೋರು ಬಾಹವೇ। ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿಯುಗಧಾರರಿಣೇ ನಮಃ। ಶ್ರೀರುದ್ರ.... ವಿಷ್ಣವೇ ನಮಃ ನಮಸ್ಕಾರಾನ್ ಸಮರ್ಪಯಾಮಿ। ಇತಿ ದಂಡವತ್ ಪ್ರಣಮೇತ್। ಓಂ

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋ ವಿಷ್ಣುಃ । ಪ್ರಚೋದಯಾತ್ ॥ ಪ್ರಸನ್ನಾರ್ಘ್ಯಂ ಸಮರ್ಪಯಾಮಿ। ಪುನಃ ಪೂಜಾಂ ಕರಿಷ್ಯೇ । ಆವಾಹಿತ ದೇವತಾಭ್ಯೋ ನಮಃ। ಧ್ಯಾನಾವಾಹನಾದಿ ಸರ್ವೋಪಚಾರ ಪೂಜಾಂ ಸಮರ್ಪಯಾಮಿ। ಛತ್ರಚಾಮರಾದಿ ರಾಜೋಪಚಾರ ದೇವೋಪಚಾರ ಪೂಜಾಂ ಸಮರ್ಪಯಾಮಿ । ಇತ ಜಲಂ ವಿಸೃಜ್ಯ । ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರ। ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುತೇ । ಇತಿ ಪ್ರಾರ್ಥ್ಯ । ನ್ಯೂನಾತಿರಿಕ್ತ ದೋಷಪರಿಹಾರಾರ್ಥಂ ನಾಮತ್ರಯ ಮಂತ್ರ ಜಪಂಕರಿಷ್ಯೇ। ಓಂ ಅಚ್ಯುತಾಯ ನಮಃ। ಅನಂತಾಯ ನಮಃ ಗೋವಿಂದಾಯ ನಮಃ। ಗೋತ್ರಾಭಿವಾದನಂ ಕೃತ್ವಾ। ನಾರಾಯಣಂ ಪದ್ಮಭುವಂ ವಸಿಷ್ಠಂ ಶಕ್ತಿಂ ಚ ತತ್ಪುತ್ರ ಪರಾಶರಂ ಚ । ವ್ಯಾಸಂ ಶುಕಂ ಗೌಡಪದಂ ಮಹಾಂತಂ ಗೋವಿಂದ ಯೋಗೀಂದ್ರಮಥಾಸ್ಯ ಶಿಷ್ಯಂ। ಶ್ರೀ ಶಂರಾಚಾರ್ಯ ಮಥಾಸ್ಯ ಪದ್ಮಪಾದಂಚ ಹಸ್ತಾಮಲಕಂ ಚ ಶಿಷ್ಯಂ। ತಂ ತೋಟಕಂ ವಾರ್ತಿಕ ಕಾರಮಾನ್ಯಾನ್ ಅಸ್ಮದ್ ಗುರೂನ್ ಸಂತತಮಾನತೋಽಸ್ಮಿ। ಇತಿ ನಮಸ್ಕೃತ್ಯ । ದೇವ ದೇವ ಜಗನ್ನಾಥ ಹೃದಯೇ ಮಮನಿರ್ಮಲೇ । ಯಾಗದೇಶಾತ್ ಸಮಾಗತ್ಯ ನಿವಾಸಂ ಕುರು ಲೀಲಯಾ। ಹೃತ್ಪದ್ಮಕರ್ಣಿಕಾಮಧ್ಯೇ ದೇವ್ಯಾ ಸಹ ಮಹೇಶ್ವರ । ಪ್ರವಿಶತ್ವಂ ಮಹಾದೇವ ಸರ್ವೈರಾವರಣೈಃ ಸಹ । ಇತಿ ದೇವತಾ ಆತ್ಮನಿ ವಿಸರ್ಜಯೇತ್ । ಅನೇನ ದೇವತಾರ್ಚನ ಕರ್ಮಣಾ ಭಗವಾನ್ ಸರ್ವಾತ್ಮಕಃ ಶ್ರೀ ಪರಮೇಶ್ವರ ಪ್ರೀಯತಾಂ। ಇತಿ ಜಲಂ ವಿಸೃಜೇತ್ । ಅಥ ಅಭಿಷಿಕ್ತಜಲೇ ಶಂಖೋದಕಂ ತುಲಸೀದಲಂ ಚ ಕ್ಷಿಪ್ತ್ವಾ। ತೀರ್ಥಂಪಿಬೇತ್। ಅಕಾಲಮೃತ್ಯುಹರಣಂ ಸರ್ವವ್ಯಾಧಿ ನಿವಾರಣಂ । ಸರ್ವಪಾಪೋಪಶಮನಂ ಹರಿಪಾದೋದಕಂ ಶುಭಂ। ಇತಿ ತೀರ್ಥಂ ಸ್ವೀಕೃತ್ಯಂ। ಅಭಿವಾದಯೇತ್ । ಅಥ ಪ್ರಸಾದಂ ಧೃತ್ವಾ। ದ್ವಿರಾಚಮ್ಯ ವಿಷ್ಣುಸ್ಮರಣಂಕೃತ್ವಾ। ಘಂಟಾಂ ವಾದಯೇತ್।

ಇತಿ ನಿತ್ಯದೇವತಾರ್ಚನಮ್

# ಅಥ ನಿತ್ಯದೇವರ್ಷಿ ಪಿತೃತರ್ಪಣ ವಿಧಿಃ ॥

ಅಥ ದ್ವಿರಾಚಮ್ಯ ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ದೇವರ್ಷಿಪಿತೃತರ್ಪಣಂ ಕರಿಷ್ಯೇ ॥ ಇತಿ ಸಂಕಲ್ಪ ॥ ಪ್ರಾಙ್ಮುಖೋ ದೇವತೀರ್ಥೇನ– ಅಂಗುಲ್ಯಗ್ರೈಃ – ಅಕ್ಷತೋದಕೈರ್ದೇವಾಂಸ್ತರ್ಪಯೇತ್ ॥ ಬ್ರಹ್ಮಾದಯೋ ಯೇ ದೇವಾಸ್ತಾನ್ದೇವಾಂಸ್ತರ್ಪಯಾಮಿ ॥ ಓಂ ಭೂಃ ದೇವಾಂಸ್ತರ್ಪಯಾಮಿ ॥ಓಂ ಭುವಃ ದೇವಾಂಸ್ತರ್ಪಯಾಮಿ ॥ ಓಂ ಸುವಃ ದೇವಾಂಸ್ತರ್ಪಯಾಮಿ ॥ ಓಂ ಭೂರ್ಭುವಃಸುವಃ ದೇವಾಂಸ್ತರ್ಪಯಾಮಿ ॥ ದೇವಪತ್ನೀಸ್ತರ್ಪಯಾಮಿ ॥ ದೇವಪುತ್ರಾಂಸ್ತರ್ಪಯಾಮಿ ದೇವಪಾರ್ಷದಾಂಸ್ತರ್ಪಯಾಮಿ ॥ ದೇವಪಾರ್ಷದೀಸ್ತರ್ಪಯಾಮಿ ॥ ಇತಿ ಸಕೃತ್ಸಕೃತ್ತರ್ಪಯಿತ್ವಾ। ಅಥ ನಿವೀತಿ ॥ ಉದಙ್ಮುಖಃ ಕಾಯತೀರ್ಥೇನ– ಕನಿಷ್ಠಿಕಾಮೂಲದೇಶೇನ–ಋಷೀನ್ ದ್ವಿರ್ದ್ವಿಸ್ತರ್ಪಯೇತ್ ಕೃಷ್ಣದ್ವೈಪಾಯನಾದಯೋ ಯೇ ಋಷಯಃ।ಓಂ ಭೂ ಋಷೀಂಸ್ತರ್ಪಯಾಮಿ ತರ್ಪಯಾಮಿ॥ ಓಂ ಭುವಃ ಋಷೀಂಸ್ತರ್ಪಯಾಮಿ ತರ್ಪಯಾಮಿ॥ ಋಷೀಪುತ್ರಾಂಸ್ತರ್ಪಯಾಮಿ ತರ್ಪಯಾಮಿ ॥ ಋಷಿಪಾರ್ಷದಾಂಸ್ತರ್ಪಯಾಮಿ ತರ್ಪಯಾಮಿ॥ ಋಷಿಪಾರ್ಷದೀಸ್ತಪಯಾಮಿ। ತರ್ಪಯಾಮಿ। ಇತಿ ದ್ವಿರ್ದ್ವಿಸ್ತರ್ಪಯಿತ್ವಾ॥ ಅಥ ಪ್ರಾಚೀನಾವೀತೀ ॥ ದಕ್ಷಿಣಾಮುಖಃ ಪಿತೃತೀರ್ಥೇನ– ತರ್ಜನ್ಯಂಗುಷ್ಠಯೋರ್ಮಧ್ಯದೇಶೇನ– ಕೇವಲಜಲೇನ ಪಿತೄನ್ ತ್ರಿಸ್ತ್ರಿಸ್ತರ್ಪಯೇತ್ ॥

ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ।
ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ॥

ಇತಿ ವಸ್ತ್ರಂ ನಿಷ್ಪೀಡಯೇತ್ ॥

# ಅಥ ವೈಶ್ವದೇವ ಪ್ರಯೋಗಃ

ವೈಶ್ವದೇವಂ ಔಪಸನಾಗ್ನೌ ಕುರ್ಯಾತ್ ॥ ವಿಚ್ಛಿನ್ನಾಗ್ನಿಶ್ಚೇತ್ ಪಚನಾಗ್ನೌ ಕುರ್ಯಾತ್ ॥ ಅಥ ಪಚನಾಗ್ನಿ ಸಮೀಪ ಉಪವಿಶ್ಯ । ಓಂ ಭೂರ್ಭುವಸ್ಸುವರೋಂ ಆವಸಥ್ಯನಾಮಾಗ್ನಿಂ ಪ್ರತಿಷ್ಠಾಪಯಾಮಿ ॥ ಇತ್ಯಗ್ನಿಂ ಪ್ರತಿಷ್ಠಾಪ್ಯ ದ್ವಿರಾಚಮ್ಯ ಪ್ರಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮ ಪಂಚಸೂನಾದೋಷಪರಿಹಾರಾರ್ಥಂ ಪ್ರಾತಃಸಾಯಂ ವೈಶ್ವದೇವಹೋಮಂ ಸಮಾನತಂತ್ರೇಣ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಓಂ ಸ್ವಾಹಾ ಜುಷಸ್ವ ನಃ ಸಮಿಧಮಗ್ನೇ ಇತ್ಯಾದ್ಯಗ್ನ್ಯ ಲಂಕರಣಾಂತಂ ಕೃತ್ವಾ ॥ ಅಗ್ನಿಂ ಪ್ರಜ್ವಲಿತ ... । ಚತ್ವಾರಿ ಶೃಂಗಾ ... । ಇತ್ಯಗ್ನಿಂ ಧ್ಯಾತ್ವಾ ॥ ನೈವೇದ್ಯ ಕಾಲೇ ಪೃಥಗುದ್ಧೃತಮಭಿಘಾರಿತಮನ್ನಂ ಪ್ರತ್ಯಾಹುತ್ಯಂಗುಷ್ಠ ಪರ್ವಮಾತ್ರಂ ಹಸ್ತೇನೈವ ಸೂಕರೀಮುದ್ರಯಾ ಜುಹೋತಿ ॥ ಯಥಾ ॥ ಓಂ ಅಗ್ನಯೇ ಸ್ವಾಹಾ ॥ ಅಗ್ನಯ ಇದಂ ನ ಮಮ ॥ ಇತಿ ಸರ್ವತ್ರ ಮಂತ್ರವದ್ದುದ್ದೇಶತ್ಯಾಗಃ ॥ ಓಂ ಸೋಮಾಯ ಸ್ವಾಹಾ ॥ ಧ್ರುವಕ್ಷಿತಯೇ ಸ್ವಾಹಾ । ಅಚ್ಯುತಕ್ಷಿತಯೇ ಸ್ವಾಹಾ । ಈಶಾನಾಯ ಸ್ವಾಹಾ । ಜಯಂತಾಯ ಸ್ವಾಹಾ । ಧರ್ಮಾಯ ಸ್ವಾಹಾ । ಓಂ ಧರ್ಮರುಚಯೇ ಸ್ವಾಹಾ ॥ ಓಂ ಧಾನ್ವಂತರಾಯ ಸ್ವಾಹಾ ॥ ಓಂ ವಿದ್ಯಾಯೈ ಸ್ವಾಹಾ ॥ ಓಂ ಅಂಬಿಕಾಯೈ ಸ್ವಾಹಾ ॥ ಓಂ ಹರಯೇ ಸ್ವಾಹಾ ॥ ಓಂ ಗಣೇಭ್ಯಃ ಸ್ವಾಹಾ ॥ ಓಂ ಗಣಪತಿಭ್ಯಃ ಸ್ವಾಹಾ ॥ ಓಂ ವರ್ಷಭ್ಯಃ ಸ್ವಾಹಾ ॥ ವಿಶ್ವೇಭ್ಯೋದೇವೇಭ್ಯಃ ಸ್ವಾಹಾ। ಸಾಧ್ಯೇಭ್ಯೋದೇವೇಭ್ಯ ಸ್ವಾಹಾ । ಓಂ ಸರ್ವೇಭ್ಯೋ ದೇವೇಭ್ಯಃ ಸ್ವಾಹಾ ॥ ಓಂ ಸರ್ವಾಭ್ಯೋದೇವತಾಭ್ಯಃ ಸ್ವಾಹಾ ॥ ಓಂ ಭೂಃ ಸ್ವಾಹಾ ॥ ಅಗ್ನಯ ಇದಂ ನ ಮಮ ॥ ಓಂ ಭುವಃ ಸ್ವಾಹಾ ॥ ವಾಯುವ ಇದಂ ನ ಮಮ ॥ ಓ ಸುವಃ ಸ್ವಾಹಾ ॥ ಸೂರ್ಯಾಯೇದಂ ನ ಮಮ ॥ ಓಂ ಭೂರ್ಭುವಃಸುವಃ ಸ್ವಾಹಾ ॥ ಪ್ರಜಾಪತಯ ಇದಂ ನ ಮಮ ॥ ಇತಿ ಪಂಚವಿಂಶತ್ಯಾಹುತೀರ್ಹುತ್ವಾ॥ ಅಥೇಶಾನಭಾಗೇ ॥ ಓಂ ಅಗ್ನಯೇ ಸ್ವಿಷ್ಟಕೃತೇ ಸ್ವಾಹಾ ॥ ಇತಿ ಹುತ್ವಾ ॥ ಅಗ್ನಯೇ ಸ್ವಿಷ್ಟಕೃತ ಇದಂ ನ ಮಮ ॥ ಪುನರ್ಜುಷಸ್ವ ನ ಇತ್ಯಾದ್ಯುತ್ತರಪರಿಷೇಕಾದಿಕಂ ಕೃತ್ವಾ॥ ಅನೇನ ಮತ್ಕೃತವೈಶ್ವದೇವ ಹೋಮಕರ್ಮಣಾ ಶ್ರೀ ಪರಮೇಶ್ವರಃ ಪ್ರೀಯತಾಮ್ ॥

ಓಂ ತತ್ಸತ್ ॥ ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಪರಮೇಶ್ವರ । ಯತ್ರ ಬ್ರಹ್ಮಾದಯೋ ದೇವಾಸ್ತತ್ರ ಗಚ್ಛ ಹುತಾಶನ ॥ (ಹುತಾಂತೇ) ಶ್ರೀ ಯುಜ್ಞಪುರುಷಾಯ ನಮಃ ಯಥಾಸ್ಥಾನಮುದ್ವಾಸಯಾಮಿ ॥ ಇತ್ಯುದ್ವಾಸ್ಯ ॥ ತತೋ ವೈಶ್ವದೇವಶಿಷ್ಟಮನ್ನಂ ಗೃಹೀತ್ವಾ ಜಲಪಾತ್ರಮಾದಾಯ ಬಹಿರ್ಗತ್ವಾ ಉದಗ್ದಿಶಿ ಭೂಮೌ ಕಿಂಚಿಜ್ಜಲಂ ನಿನೀಯ ॥ ಓಂ ಯೇ ಭೂತಾಃ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯ ಪ್ರೇಷ್ಯಾಃ। ತೇಭ್ಯೋ ಬಲಿಂ ಪುಷ್ಟಿಕಾಮೋ ಹರಾಮಿ ಮಯಿ ಪುಷ್ಟಿಪತಿರ್ದಧಾತು ಸ್ವಾಹಾ ॥ ಇತಿ ಬಲಿಂ ದತ್ವಾ॥ ದಿವಾನಕ್ತಂಚರೇಭ್ಯಃ ಸರ್ವೇಭ್ಯೋಭೂತೇಭ್ಯಃ ತೃಪ್ತಿರಸ್ತು॥ ಇತಿ ತದುಪರಿ ಕಿಂಚಿಜ್ಜಲಂ ನಿಷಿಚ್ಯ ಹಸ್ತಪಾದೌ ಪ್ರಕ್ಷಾಲ್ಯ ಆಚಮ್ಯ ಅಂತಃಪ್ರವಿಶೇತ್॥

ಇತಿ ವೈಶ್ವದೇವಬಲಿಹರಣ ಪ್ರಯೋಗಃ

***

# ಅಥ ಭೋಜನವಿಧಿಃ

ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ ॥ ಜ್ಞಾನಸೌಭಾಗ್ಯಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತಿ ॥ ಇತಿ ನಮಸ್ಕೃತ್ಯ । ಓಂ ಭೂರ್ಭುವಸ್ಸುವಃ ತತ್ಸವಿತುಃ ...ಪ್ರಚೋದಯಾತ್ ॥ ಸತ್ಯಂ ತ್ವರ್ತೇನ ಪರಿಷಿಂಚಾಮಿ ಇತಿ ಜಲೇನ ಪ್ರದಕ್ಷಿಣಂ ಪರಿಷಿಚ್ಯ ॥ ತದ್ದಕ್ಷಿಣತಃ ದಂಡಾಕಾರೇಣ ಭೂಮೌ ಜಲಂ ನಿನೀಯ ತದುಪರಿ ಓಂ ಚಿತ್ರಾಯ ಸ್ವಾಹಾ । ಓಂ ಚಿತ್ರಗುಪ್ತಾಯ ಸ್ವಾಹಾ । ಯಮಾಯ ಸ್ವಾಹಾ । ಯಮಧರ್ಮರಾಜಾಯ ಸ್ವಾಹಾ । ಓಂ ಸರ್ವಭೋತೇಭ್ಯಃ ಸ್ವಾಹಾ । ಇತಿ ಪ್ರಾಗಪವರ್ಗಾನ್ ಬಲೀನ್ ದತ್ವಾ । ಇತಿ ತದುಪರಿಜಲಮಾಸಿಚ್ಯ ಏಕೀಕೃತ್ಯ । ಹಸ್ತಂ ಪ್ರಕ್ಷಾಲ್ಯ ದಕ್ಷಿಣಹಸ್ತೇ ಜಲಮಾದಾಯ ವಾಮಹಸ್ತಸ್ಯ ಅನಾಮಿಕಯಾ ಭೋಜನಪಾತ್ರಂ ಸ್ಪಷ್ಟ್ವಾ ॥ ಓಂ ಅಂತಶ್ಚರತಿ ಭೂತೇಷು ಗುಹಾಯಾಂ ವಿಶ್ವಮೂರ್ತಿಷು । ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವ ಮಿಂದ್ರಸ್ತ್ವ ರುದ್ರಸ್ತ್ವಂ ವಿಷ್ಣುಸ್ತ್ವಂ ಬ್ರಹ್ಮ ತ್ವಂ ಪ್ರಜಾಪತಿಃ ತ್ವಂ ತದಾಪ ಆಪೋಜ್ಯೋತೀ ರಸೋಮೃತಂ ಬ್ರಹ್ಮಭೂರ್ಭುವಸ್ಸುವರೋಂ। ಓಂ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋರಯೀಣಾಂ ॥ ಓಂ ಅಮೃತೋಪಸ್ತರಣಮಸಿ ಸ್ವಾಹಾ ॥ ಇತಿ ಜಲಂ ಪೀತ್ವಾ ॥ ಓಂ ಪ್ರಾಣಾಯ ಸ್ವಾಹಾ॥ ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ । ಇತಿ ಕಿಂಚಿದನ್ನಂ ಷಡ್ವಾರಂ ಮುಖೇ ಜುಹುಯಾತ್ ॥ ಭೋಜನಾಂತೇ ಹಸ್ತೇ ಜಲಂ ಗೃಹೀತ್ವಾ । ಓಂ ಅಮೃತಾಪಿಧಾನಮಸಿ ಸ್ವಾಹಾ । ಇತಿ ಜಲಮರ್ಧಂ ಪೀತ್ವಾ ಅವಶಿಷ್ಟಂ ಭೂಮೌಕ್ಷಿಪೇತ್ । ಹಸ್ತಪಾದೌ ಪ್ರಕ್ಷಾಲ್ಯ । ದ್ವಿರಾಚಮೇತ್ ।

ರಾತ್ರಿ ಭೋಜನೇ ತು ಋತಂತ್ವಾಸತ್ಯೇನ ಪರಿಷಿಂಚಾಮಿ ಇತಿ ಜಲೇನ ಪ್ರದಕ್ಷಿಣಂ ಭೋಜನ ಪಾತ್ರಂ ಪರಿಷಿಂಚೇತ್ । ಅನ್ಯತ್ ಸರ್ವಂ ಮಧ್ಯಾಹ್ನ ಭೋಜನವತ್ ॥

ಇತಿ ಭೋಜನ ವಿಧಿಃ

***

# ಪಂಚಗವ್ಯವಿಧಿಃ

ಶುಚೌದೇಶೇ ಸ್ವಸ್ತಿಕ ಮಂಡಲಂ ವಿಲಿಖ್ಯ, ತತ್ರ ತಂಡುಲರಾಶೌ ಸಂಯೋಜನ ಸ್ಥಾಲೀಂನಿಧಾಯ, ತತ್ರ ಸಪ್ತದರ್ಭಮಯಂ ಕೂರ್ಚಂ ನಿಧಾಯ ಸಂಯೋಜನ ಪಾತ್ರಸ್ಯ ಉತ್ತರತಃ ಪಂಚಗವ್ಯದ್ರವ್ಯಾಣಿ.

| | | | | |
|---|---|---|---|---|
| | | ಪೂರ್ವ | | |
| | | ಗೋಮೂತ್ರ<br>ಆದಿತ್ಯಃ | | |
| ಉತ್ತರ | ದಧಿ<br>ಶುಕ್ರಃ | ಘೃತಂ<br>ಅಗ್ನಿಃ | ಗೋಮಯಂ<br>ವಾಯುಃ | ದಕ್ಷಿಣ<br>ಸಂಯೋಜನದ<br>ಪಾತ್ರ |
| | ಕುಶೋದಕಂ<br>ಗಂಧರ್ವಃ | ಕ್ಷೀರಂ<br>ಸೋಮಃ | | |

ಏವಂ ಪೂರ್ವಾದಿ ಕ್ರಮೇಣ ಸ್ಥಾಪಯೇತ್. ಆಚಮನಾದಿ ಕೃತ್ವಾ ದೇಶಕಾಲೌ ಸಂಕೀರ್ತ್ಯ – ಶ್ರೀಪರಮೇಶ್ವರ ಪ್ರೀತ್ಯರ್ಥಂ ದೇಹಶುದ್ಧ್ಯರ್ಥಂ ಪಂಚಗವ್ಯ ಪ್ರಾಶನಂ ಕರ್ತುಂ ಪಂಚಗವ್ಯದೇವತಾ ವಾಹನಂ ಕರಿಷ್ಯೇ ಇತಿ ಸಂಕಲ್ಪ್ಯ.

ಪೂರ್ವಾದಿ ಕ್ರಮೇಣ ಓಂ ಆದಿತ್ಯಂ ಆವಾಹಯಾಮಿ ಇತ್ಯಾದಿ ತತ್‌ತತ್‌ದೇವಾನ್ ಆವಾಹಯೇತ್.

ತತಃ ಸಂಯೋಜನಪಾತ್ರೇ ಪಂಚಗವ್ಯದ್ರವ್ಯಾಣಿ ಸಂಯೋಜಯೇತ್ ಯಥಾ

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ ಇತಿ ಗೋಮೂತ್ರಂ।

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಂ।

ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥ ಇತಿ ಗೋಮಯಂ.

ಮಮ ಶರೀರ ಶುದ್ಧ್ಯರ್ಥಂ ಸ್ನಾನ – ಪವನ – ಮಂತ್ರಾಚಮನ ಮಂತ್ರ – ಪ್ರೋಕ್ಷಣಂ ಕರಿಷ್ಯೇ ಇತಿ ಸಂಕಲ್ಪ್ಯ ದ್ವೌ ದರ್ಭೌ ಗೃಹೀತ್ವಾ ಆತ್ಮಾನಂ ಪ್ರೋಕ್ಷಯೇತ್।

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋ ಪಿವಾ

ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಂಭ್ಯಂತರಃ ಶುಚಿಃ

ಅಪೋಹಿಷ್ಠಾಮಯೋಭುವಸ್ತಾನ ಊರ್ಜೇದಧಾತನ । ಮಹೇರಣಾಯ ಚಕ್ಷಸೇ। ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ। ಉಶತೀರಿವ ಮಾತರಃ। ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋ ಜನಯಥಾ ಚ ನಃ। ಇತಿ ತ್ರಿವಾರಮ್ ಏಕವಿಂಶತಿ ದರ್ಭೈೇಷು ಸಪ್ತಸಪ್ತಭಿರ್ವಿಭಕ್ತೇಷು ಪ್ರಥಮ ಭಾಗಂ ಗೃಹೀತ್ವಾ ಓಂ ಭೂಃ ಚಿತ್ಪತಿಸ್ತ್ವಾ ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ। ಆಸ್ಯಾದಾರಭ್ಯ ಶಿರೋಂತಂ ತ್ರಿಃ ಪರಿಮೃಜೇತ್ । ದ್ವಿತೀಯ ಭಾಗಂ ಗೃಹೀತ್ವಾ ಓಂ ಭುವಃ ವಾಕ್ಪತಿಸ್ತ್ವಾ ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋ ಸೂರ್ಯಸ್ಯ ರಶ್ಮಿಭಿಃ। ನಾಭಿಮಾರಭ್ಯ ಆಸ್ಯಾಂತಂ ತ್ರಿಃ ಪರಿಮೃಜೇತ್ । ತೃತೀಯ ಭಾಗಂ ಗೃಹೀತ್ವಾ ಓಂ ಸುವಃ ದೇವಸ್ತ್ವಾ ಸವಿತಾ ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ । ನಾಭಿಮಾರಭ್ಯ ಗುಲ್ಫಾಂತಂ ತ್ರಿಃ ಪರಿಮೃಜೇತ್ । (ದರ್ಭಾನದ್ಭಿಃ ಸಂಸ್ಪೃಶ್ಯ ಉದಙ್ನಿರಸ್ಯ ಅಪ ಉಪಸ್ಪೃಶ್ಯ) ಆಚಮನಂ ಕೃತ್ವಾ ದರ್ಭಪಾಣಿರ್ಮಂತ್ರಾಚಮನಂ ಕುರ್ಯಾತ್ ಆಪೋಹಿಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ ಮಹೇರಣಾಯ ಚಕ್ಷಸೇ ಸ್ವಾಹಾ । ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ। ಉಶ ತೀರಿವ ಮಾತರಃ ಸ್ವಾಹಾ । ತಸ್ಮಾ ಅರಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ ಆಪೋ ಜನಯಥಾ ಚ ನಃ ಸ್ವಾಹಾ ಓಂ ಶಿರಶ್ಚಕ್ಷುಷೀ ನಾಸಿಕೇ ಶ್ರೋತ್ರೇ ಹೃದಯಮಾಲಭ್ಯ ದ್ವಿರಾಚಮ್ಯ ಮಂತ್ರಪ್ರೋಕ್ಷಣಂ ಕುರ್ಯಾತ್ ದಧಿಕ್ರಾವ್ಣೋಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ಸುರಭಿ ನೋ ಮುಖಾಕರತ್ ಪ್ರಣ ಆಯೂಗ್ಂಷಿ ತಾರಿಷತ್। ಆಪೋಹಿಷ್ಠಾ ಮಯೋಭುವಃ – ಆಪೋ ಜನಯಥಾ ಜನಃ ಇತಿ ಮಂತ್ರೈಃ (ಅನಂತರಂ ಹಿರಣ್ಯ ವರ್ಣಾಃ ಶುಚಯಃ ಪಾವಕಾಃ ಇತ್ಯಾದಿ ಪವಮಾನ ಮಂತ್ರಗಳಿಂದಲೂ ಪ್ರೋಕ್ಷಣ ಮಾಡಿಕೊಳ್ಳಬಹುದು). ಅಥ ಶಾರೀರಷಟ್ಕಸ್ಯ ಆತ್ಮಾ ಋಷಿಃ ಪ್ರಕೃತಿ ಪುರುಷಂ

ಛಂದಃ ಸತ್ಯಾತ್ಮಾ ದೇವತಾ ಮಮ ಅಂತರ್ಬಹಿಃ ಶರೀರ ಶುದ್ಧ್ಯರ್ಥೇ ಜಪೇ ವಿನಿಯೋಗಃ ಹೃದಯಂ ಸ್ಪೃಷ್ಟ್ವಾ

ಶಾರೀರಮಂತಃ ಕರಣೋಪಘಾತಂ ವಾಚಶ್ಚ ವಿಷ್ಣುರ್ಭಗವಾನಶೇಷಃ ।

ಶಮಂ ನಯತ್ವಾಶು ಮಮೇಹ ಶರ್ಮ ಪಾಪಾದನಂತೇ ಹೃದಿಸಂನಿವಿಷ್ಟೇ ॥

ಅಂತಃಶುದ್ಧಿಂ ಬಹಿಃ ಶುದ್ಧಿಂ ಶುದ್ಧೋ ಧರ್ಮಮಯೋಽಚ್ಯುತಃ ।

ಸಕರೋತ್ವಮಲೇ ತಸ್ಮಿನ್ ಶುಚಿರೇವಾಸ್ಮಿ ಸರ್ವಶಃ ॥

ಬಾಹ್ಯೋಪಘಾತಾನನಘಾತಾನ್ ಬೇದ್ಧಾಂಶ್ಚ ಭಗವಾನಜಃ ।

ಶಮಂ ನಯತ್ವನಂತಾತ್ಮಾ ವಿಷ್ಣುಶ್ಚೇತಸಿ ಸಂಸ್ಥಿತಃ ॥

ಶಾರೀರಂ ಮೇ ಹೃಷಿಕೇಶ ಪುಂಡರೀಕಾಕ್ಷ ಮಾನಸಮ್ ।

ಪಾಪಂ ಪ್ರಶಮಯಾದ್ಯ ತ್ವಂ ವಾಕ್ಕೃತಂ ಮಮ ಮಾಧವ ॥

ಯದ್ಯಪ್ಯುಪಹತಃ ಪಾಪೈರ್ಯದಿ ವಾತ್ಯಂತ ದುಷ್ಕೃತೈಃ ।

ತಥಾಪಿ ಸಂ ಸ್ಮರೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ ॥

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋ ಪಿವಾ ।

ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

ಮಮ ಅಂತರ್ಬಹಿಃ ಶುದ್ಧಿರಸ್ತ್ವಿತಿ ಭವಂತೋ ಬ್ರುವಂತು । ಅಂತರ್ಬಹಿಃ ಶರೀರಶುದ್ಧಿರಸ್ತು ಇತಿ ಪ್ರತಿವಚನಂ (ಏವಂ ಯಥಾನುರೂಪಂ ಪ್ರತಿವಚನಂ ಸರ್ವತ್ರ ಬ್ರಾಹ್ಮಣೈರ್ವಕ್ತವ್ಯಮೇವ) ಪೂರ್ವೋಚ್ಚಾರಿತಾಯಾಂ ಶುಭತಿಥೌ ಉದ್ದಿಷ್ಟ ಶ್ರಾದ್ಧಾಂಗ ಕಲಶಾರ್ಚನಂ ಕರಿಷ್ಯೇ । ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸಂನಿಧಿಂ ಕುರು । ಗಂಗಾದಿಸರ್ವತೀರ್ಥಾನಿ ಅತ್ರ ಸಂನಿಹಿತಾನಿ ಭವಂತು ಓಂ ಸ್ವಸ್ತಿ ಗಂಧ ಪತ್ರ ಪುಷ್ಪಾಕ್ಷತಾದಿ ಸಕಲಾರಾಧನೈಃ ಸ್ವರ್ಚಿತಮಸ್ತು ಇತಿ ಕಲಶಮಭ್ಯರ್ಚ್ಯ ಕಲಶೋದಕೇ ಕೂರ್ಚ – ಹಿರಣ್ಯ – ಯವಾಕ್ಷತ – ತಿಲಾನ್ ನಿಧಾಯ ಶ್ರಾದ್ಧಭೂಮಿಂ ಗಯಾಂಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಂ ವಸ್ವಾದೀಂಶ್ಚ ಪಿತ್ರೂನ್ ಧ್ಯಾತ್ವಾ

ತತಃ ಶ್ರಾದ್ಧಂ ಪ್ರವರ್ತತೇ । ಪ್ರವರ್ತಯ ಇತಿ ಪ್ರತಿ । ಕರ್ತಾಕಟಿಂಬದ್ಧ್ವಾ ಕುಶತಿಲಯವ ಹಿರಣ್ಯಸಹಿತಂ ಜಲ ಪಾತ್ರಂ ಗೃಹೀತ್ವಾ ಕನಿಷ್ಠಭ್ರಾತೃಪೂರ್ವಕಂ ಬ್ರಾಹ್ಮಣಪ್ರದಕ್ಷಿಣತ್ರಯಂ ಕುರ್ಯಾತ್ । ಸಮಗ್ರ ಸಂಪತ್ ಸಮವಾಪ್ತಿ ಹೇತವಃ ಸಮುತ್ಥಿತಾಪತ್ ಕುಲಧೂಮಕೇತವಃ । ಅಪಾರ ಸಂಸಾರ ಸಮುದ್ರ ಸೇತವಃ ಪುನಂತು ಮಾಂ ಬ್ರಾಹ್ಮಣ ಪಾದ ಪಾಂಸವಃ। ಆಪದ್‌ಘನಧ್ವಾಂತ ಸಹಸ್ರಭಾನವಃ । ಸಮೀಹಿತಾರ್ಥಾರ್ಪಣ ಕಾಮಧೇನವಃ । ಸಹಸ್ರಪಾದಾಂಬು ಪವಿತ್ರ ಮೂರ್ತಯೋ ರಕ್ಷಂತು ಮಾಂ ಬ್ರಾಹ್ಮಣಪಾದ ಪಾಂಸವಃ । ಯಾವತೀರ್ವೈ ದೇವತಾಃ ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ । ತಸ್ಮಾತ್ ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾತ್। ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ । ಸರ್ವೆ ಬ್ರಾಹ್ಮಣೇಭ್ಯೋ ನಮಃ । ನಮೋ ಬ್ರಹ್ಮಣ್ಯ ದೇವಾಯ ಗೋ ಬ್ರಾಹ್ಮಣ ಹಿತಾಯಚ ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ಇತಿ ಪಠನ್ ಪ್ರದಕ್ಷಿಣೀಕೃತ್ಯ ಕುಶಾದೀನ್ ಬ್ರಾಹ್ಮಣಾನಾಂ ಪುರತೋ ನಿಧಾಯ । ಪ್ರಾಚೀನಾವೀತೀ ಅಸ್ಮತ್‌ಪಿತುಃ (ಅಸ್ಮನ್ಮಾತುಃ) ಪ್ರತಿ ಸಾಂವತ್ಸರಿಕ ಶ್ರಾದ್ಧೇ ಯಥಾಶಕ್ತಿ ವಿನಿಹಿತಂ ಬ್ರಹ್ಮದಂಡಂ ಸ್ವೀಕೃತ್ಯ ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು । ಅಧಿಕಾರ ಸಂಪದಸ್ತು – ಇತಿ ಪ್ರತಿ । ಉಪವೀತೀ ದ್ವಿರಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಏವಂಗುಣವಿಶಿಷ್ಟಾಯಾಂ ವಿಷ್ಣುವಾರ ವಿಷ್ಣುಯೋಗ ವಿಷ್ಣುಕರಣಯುಕ್ತಾಯಾಂ ವಿಷ್ಣುತಿಥೌ । ಪ್ರಾಚೀನಾವೀತಿ ಅಸ್ಮತ್ಪಿತುಃ ಪ್ರತಿಸಾಂವತ್ಸರಿಕ ಶ್ರಾದ್ಧೇ ಅಸ್ಮತ್ಪಿತೃ – ಪಿತಾಮಹ – ಪ್ರಪಿತಾಮಹಾನಾಂ ಕೇಶವ – ನಾರಾಯಣ – ಗೋವಿಂದ ಶರ್ಮಣಾಂ।, ಕಾಶ್ಯಪ ಗೋತ್ರಾಣಾಂ, ವಸು – ರುದ್ರಾದಿತ್ಯ ರೂಪಾಣಾಂ (ಉಪವೀತೀ) ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವನಾಂ,

1. ಈ ಸ್ಥಳದಲ್ಲಿ ಕರ್ತನು ಕ್ರಮವಾಗಿ ತನ್ನ ತಂದೆ – ಅಜ್ಜ – ಮುತ್ತಜ್ಜರ ಹೆಸರನ್ನೂ ತನ್ನ ಗೋತ್ರವನ್ನೂ ಸೇರಿಸಿಕೊಳ್ಳಬೇಕು. ಹೀಗೆಯೇ ತಾಯಿಯ ಶ್ರಾದ್ಧದಲ್ಲಿ ಮಾತೃ, ಪಿತಾಮಹೀ, ಪ್ರಪಿತಾಮಹಿಯರ ಹೆಸರುಗಳನ್ನು ಸೇರಿಸಿಕೊಳ್ಳಬೇಕು. ಹೇಗೆಂದರೆ, ಅಸ್ಮನ್ಮಾತುಃ ಪ್ರತಿಸಾಂವತ್ಸರಿಕ ಶ್ರಾದ್ಧೇ ಅಸ್ಮನ್ಮಾತೃ – ಪಿತಾಮಹೀ – ಪ್ರಪಿತಾಮಹೀನಾಂ ಲಕ್ಷ್ಮೀ – ದೇವಕೀ – ರಾಜಮ್ಮಾ

ದೇವೀನಾಂ – ಇತ್ಯಾದಿ. ತನ್ನ ಗೋತ್ರವೇ ಇವರ ಗೋತ್ರವಾಗಿರುತ್ತದೆ. ಗೋತ್ರವು ಗೊತ್ತಿಲ್ಲದಿದ್ದರೆ ಕಾಶ್ಯಪ ಗೋತ್ರವೆಂದೇ ಹೇಳತಕ್ಕದ್ದು. ಯಾರ ಹೆಸರು ಗೊತ್ತಿಲ್ಲವೋ ಆ ಸ್ಥಳದಲ್ಲಿ ಅಜ್ಞಾತನಾಮ ಎಂದು ಹೇಳಬೇಕು.

ಗದಾಧರಮೂರ್ತಿ ಶ್ರೀಮಹಾವಿಷ್ಣೋಶ್ಚಪ್ರೀತ್ಯರ್ಥಂ, ಮಮ ಅಕ್ಷಯ್ಯಾಭಿವೃದ್ಧ್ಯರ್ಥಂ ಪ್ರತಿ ಸಾಂವತ್ಸರಿಕ ಶ್ರಾದ್ಧಮನ್ನಾದಿದ್ರವ್ಯೇಣ ಹವಿಷಾ ಅದ್ಯಕರಿಷ್ಯೇ । ಕುರುಷ್ವ ಇತಿ ಪ್ರತಿ । ದರ್ಭದ್ವಯಂ ಗೃಹೀತ್ವಾ ಪುರೂರವಾದ್ರ್ರವಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಸ್ಥಾನೇ ಆಹವನೀಯಾರ್ಥೇ ಭವದ್ಭಿಃ ಕ್ಷಣಃ ಕರ್ತವ್ಯಃ । ಇತಿ ದರ್ಭದ್ವಯಂ ವಿಪ್ರಾಯದದ್ಯಾತ್ । ಅಸ್ತು – ಪ್ರತಿ । ವಿಶ್ವೇದೇವಾಶ್ಚಾತ್ರ ಸಂನಿಹಿತಾಃ ಸಂತು । ಅಸ್ತು – ಪ್ರತಿ । ವಿಶ್ವೇಭ್ಯೋ ದೇವೇಭ್ಯೋ ನಮಃ ಸ್ವಾಗತಂ । ಪ್ರಾಚೀನಾವೀತೀ ದರ್ಭತ್ರಯಂ ಗೃಹೀತ್ವಾ ಅಸ್ಮತ್ಪಿತೃ – ಪಿತಾಮಹ – ಪ್ರಪಿತಾಮಹಾನಾಂ, – – – – ಶರ್ಮಣಾಂ. – – – – ಗೋತ್ರಾಣಾಂ, ವಸು ರುದ್ರಾದಿತ್ಯ ರೂಪಾಣಾಂ ಸ್ಥಾನೇ (ಮಾತೃಶ್ರಾದ್ಧೇ ಅಸ್ಮನ್ಮಾತೃ – ಇತ್ಯಾದಿ) ಆಹವನೀಯಾರ್ಥೇ ಭವದ್ಭಿಃ ಕ್ಷಣಃ ಕರ್ತವ್ಯಃ। ಇತಿ ದರ್ಭತ್ರಯಂ ವಿಪ್ರಾಯ ದದ್ಯಾತ್। ಅಸ್ತು– ಪ್ರತಿ। ಪಿತರಶ್ಚಾತ್ರ ಸಂನಿಹಿತಾಃ ಸಂತು । ಅಸ್ತು – ಪ್ರತಿ ಅಸ್ಮತ್ಪಿತೃ ಪಿತಾಮಹ ಪ್ರಪಿತಾಮಹೇಭ್ಯೋ ನಮಃ ಸ್ವಾಗತಂ। ಉಪವೀತೀ ಶ್ರಾದ್ಧರಕ್ಷಕ ಶ್ರೀ ಮಹಾವಿಷ್ಣೋ ಅತ್ರ ಸಂನಿಹಿತೋ ಭವ । ಇತಿ ದೇವ ಸಂನಿಧೌಪ್ರಾರ್ಥ್ಯ, ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮವಾದಿಭಿಃ ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ। ಅಸ್ತು– ಪ್ರತಿ ॥

ಅಥ ಬ್ರಾಹ್ಮಣಪಾದ ಪ್ರಕ್ಷಾಲನಾರ್ಥಂ ಜಲಾದಿ ಸಂಭಾರಾನ್ ಗೃಹೀತ್ವಾ ಗೃಹಾದುಪನಿಷ್ಕ್ರಮ್ಯ ವಿಶ್ವೇಷಾಂ ದೇವಾನಾಂ ಪಾದ್ಯಸ್ಥಾನೇ ಚತುರಸ್ರ ಮಂಡಲಂ, ದಕ್ಷಿಣತಃ ಪಿತೃಣಾಂ ಪಾದ್ಯಸ್ಥಾನೇ ವರ್ತುಲಮಂಡಲಂ ಚ ಜಲೇನ ಕುರ್ಯಾತ್ । ಪುರೂರವಾದ್ರ್ರವಸಂಜ್ಞಕಾ ವಿಶ್ವೇದೇವಾಃ ನಮೋಸ್ತು। ಪಾದ್ಯಸ್ಥಾನೇ ಇಮೇದರ್ಭಾಃ। ತದುಪರಿ ಅಕ್ಷತೋದಕಂ। ಪಾದ್ಯಸ್ಥಾನಂ ಗಂಧಾದಿಸಕಲಾರಾಧನೈಃ ಸ್ವರ್ಚಿತಮಸ್ತು। ಚತುರಸ್ರಮಂಡಲೇ ವಿಪ್ರಪಾದೌ ನಿಧಾಯ। ಪುರೂರವಾದ್ರ್ರವ ಸಂಜ್ಞಕಾ ವಿಶ್ವೇ ದೇವಾ ವಃ ಸ್ವಾಗತಂ । ಅಸ್ತು – ಪ್ರತಿ । ಆಯಂವೋಗಂಧಃ ।

ಇಮೇ ಅಕ್ಷತಾಃ । ಇದಂ ವಃ ಪಾದ್ಯಮಿದಂ ವಃ ಪಾದ್ಯಂ । (ಪವಿತ್ರಂ ವಿನಾ) । ಕರ್ತೃಪತ್ನೀ ಜಲಂ ಸ್ರಾವಯತಿ ಕರ್ತಾ ವಿಪ್ರಸ್ಯ ದಕ್ಷಿಣಪಾದಂ ಪ್ರಕ್ಷಾಲಯತಿ । ಶಂ ನೋ ದೇವೀರಭಿಷ್ಟಯ ಆಪೋಭವಂತು ಪೀತಯೇ ಶಂಯೋ ರಭಿಸ್ರವಂತು ನಃ । ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣಹಿತಾಯ ಚ ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ । ನಮಃ ಶಿವಾಯ್ಯೆ ಗಂಗಾಯ್ಯೆ ಶಿವದಾಯ್ಯೆ ನಮೋ ನಮಃ ಇತಿ ದಕ್ಷಿಣಪಾದಂ ಗುಲ್ಫಾದಧಃ ಪ್ರಕ್ಷಾಲ್ಯ ವಸ್ತ್ರೇಣ ಸಂಮಾರ್ಜ್ಯ ವಿಪ್ರಪಾದೋದಕೇನ ಆತ್ಮಾನಂಪ್ರೋಕ್ಷ್ಯಪವಿತ್ರಂಧೃತ್ವಾ ಅಸ್ಮತ್ ಪಿತೃ ಪಿತಾಮಹ ಪ್ರಪಿತಾಮಹಾಃ ಸ್ವಧಾ ನಮಃ । ಪ್ರಾಚೀನಾವೀತೀ ಪಿತೄಣಾಂ ಪಾದ್ಯಸ್ಥಾನೇ ಇಮೇದರ್ಭಾಃ । ತದುಪರಿ ತಿಲೋದಕಂ । ಪಾದ್ಯಸ್ಥಾನಂ ಗಂಧಾದಿಸಕಲಾರಾಧನ್ಯೆಃ ಸ್ವರ್ಚಿತಮಸ್ತು। ವರ್ತುಲಮಂಡಲೇ ವಿಪ್ರಪಾದೌ ನಿಧಾಯ ಅಸ್ಮತ್ ಪಿತೃ–ಪಿತಾಮಹ–ಪ್ರಪಿತಾಮಹಾಃ ವಃ ಸ್ವಾಗತಂ । ಅಸ್ತು– ಇತಿ ಪ್ರತಿ । (ಮಾತೃಶ್ರಾದ್ಧೇ ಅಸ್ಮನ್ಮಾತೃ – ಪಿತಾಮಹೀ – ಪ್ರಪಿತಾಮಹ್ಯಃ ವಃ ಸ್ವಾಗತಂ) ಅಯಂ ವೋ ಗಂಧಃ ಇಮೇತಿಲಾಃ ಇದಂ ವಃ ಪಾದ್ಯಮಿದಂ ವಃ ಪಾದ್ಯಂ (ಪವಿತ್ರಂವಿನಾ) ಪೂರ್ವವತ್ ವಿಪ್ರಸ್ಯ ದಕ್ಷಿಣಪಾದಂ ಪ್ರಕ್ಷಾಲಯತಿ । ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ ಇತಿ ವಿಪ್ರಸ್ಯ ದಕ್ಷಿಣ ಪಾದಂ ಗುಲ್ಫಾದಧಃ ಪ್ರಕ್ಷಾಲ್ಯ ವಸ್ತ್ರೇಣ ಸಂಮಾರ್ಜ್ಯ ವಿಪ್ರಪಾದೋದಕೇನ ಆತ್ಮಾನಂ ಪ್ರೋಕ್ಷ್ಯ ಪವಿತ್ರಂ ವಿಸೃಜ್ಯ ಸ್ವಯಂ ಪಾದೌಪ್ರಕ್ಷಾಲ್ಯ ವಿಪ್ರಾಚಮನಾನಂತರಮಾಚಮ್ಯ ವಿಪ್ರೈಃ ಸಹ ಗೃಹಂ ಪ್ರವಿಶೇತ್.

(ಶ್ರಾದ್ಧಭೂಮೌ ಸಿಕತಾ ವಿಕೀರ್ಯ) (1) ವಿಶ್ವೇದೇವಾಃ ಪ್ರಾಙ್ಮುಖಾಃ, ಪಿತರಸ್ತು ಪ್ರಾಙ್ಮುಖಾ ಉದಙ್ಮುಖಾ ವಾ ಉಪವಿಶೇಯುಃ ಕರ್ತಾ ಪ್ರತ್ಯಙ್ಮುಖಃ ನೂತನಪವಿತ್ರಂ ಧೃತ್ವಾ ದ್ವಿರಾಚಮ್ಯ ಪ್ರಣಾನಾಯಮ್ಯ ಪೂರ್ವೋಚ್ಚಾರಿತಾಯಾಂ ವಿಷ್ಣುತಿಥೌ ಶ್ರಾದ್ಧಾಂಗತಯಾ ಶ್ರೀ ಗದಾಧರ ಮೂರ್ತಿ ಶ್ರೀ ಮಹಾವಿಷ್ಣುಪೂಜಾಂ ಕರಿಷ್ಯೇ ಇತಿ ಸಂಕಲ್ಪಯಂ । ಶ್ರೀ ಮಹಾವಿಷ್ಣವೇ ನಮಃ ಇದಮಾಸನಂ । ಇದಂ ಪಾದ್ಯಂ। ಇದಮರ್ಘ್ಯಂ। ಇದಮಾಚಮನಂ। ಇದಂ ವಸ್ತ್ರಂ। ಇಮೇ ಗಂಧಾಃ। ಇಮೇ ಅಕ್ಷತಾಃ । ಇಮಾನಿ ಪುಷ್ಪಾಣಿ ಅಯಂ ಧೂಪಃ ಶ್ರೀ ಗದಾಧರಮೂರ್ತಿ

ಶ್ರೀ ಮಹಾವಿಷ್ಣವೇ ನಮಃ ಅಷ್ಯಾರ್ಘ್ಯಂ ಸಮರ್ಪಯಾಮಿ । ಸುಪ್ರಸನ್ನೋ ವರದೋ ಭವ । ಅಥ ಯುಷ್ಮದನುಜ್ಞಯಾ ಶ್ರಾದ್ಧಾರ್ಚನಂ ಕರ್ಮಕರಿಷ್ಯೇ । ಕುರುಷ್ವ ಇತಿ ಪ್ರತಿ । ಪುರೂರವಾದ್ರ್ರವ ಸಂಜ್ಞಕಾನ್ ವಿಶ್ವಾನ್ ದೇವಾನ್ ಭವತ್ಸ್ವ್ಯ ಆವಾಹಯಿಷ್ಯೇ ಆವಾಹಯ – ಇತಿ ಪ್ರತಿ । ದರ್ಭಾಕ್ಷತ ಪುಷ್ಪಪಾಣಿಃ ಓಂ ಭೂರ್ಭವಸ್ಸುವಃ ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ಯೇ ತ್ವತ್ರ ವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ। ವಿಶ್ವೇದೇವಾ ಅತ್ರ ಸಂನಿಹಿತಾಃ ಸಂತು ಇತಿ ದರ್ಭಾದೀನ್ ವಿಪ್ರಪಾದಯೋಃ ಕ್ಷಿಪೇತ್ ಆವಾಹನಾರ್ಥಮುದಕಂ ಆಸನಾರ್ಥಂ ಧರ್ಭದ್ವಯಂ। ಆಸ್ಯತಾಂ ಧರ್ಮೋ ಸಿ ವಿಶಿ ರಾಜಾ ಪ್ರತಿಷ್ಠಿತಃ ಇದಂ ಸುಖಾಸನಂ ಅಸ್ತು ಇತಿ ಪ್ರತಿ ಅಸ್ಮತ್ಪಿತುಃ ಸಾಂವತ್ಸರಿಕ ಶ್ರಾದ್ಧೇ ವಿಶ್ವೇದೇವಾ ಕ್ಷಣಃ ಕ್ರಿಯತಾಂ ಅಸ್ತು – ಇತಿ ಪ್ರತಿ। ಅಥ ಅರ್ಚನಂ ( ವಿಶ್ವೇದೇವರನ್ನು ಅರ್ಚಿಸುವಾಗ ಬಲಮಂಡಿಯನ್ನು, ಪಿತೃಗಳನ್ನು ಅರ್ಚಿಸುವಾಗ ಎಡಮಂಡಿಯನ್ನೂ ನೆಲಕ್ಕೆ ಊರಿ ಇನ್ನೊಂದು ಮಂಡಿಯನ್ನು ಎತ್ತರಿಸಿಕೊಂಡಿರಬೇಕು) ಪುರೂರವಾದ್ರ್ರಸಂಜ್ಞಕಾ ವಿಶ್ವೇದೇವಾಃ ಇದಂ ವೋಘ್ಯಂ। ಅಸ್ತುಅರ್ಘ್ಯಂ – ಇತಿ ಪ್ರತಿ ಅಚ್ಛಾದನಾರ್ಥ ಮಿದಂ ವಸ್ತ್ರಂ। ಅಸ್ತುಸುವಸ್ತ್ರಂ। ಇದಂ ವೋ ಹಸ್ತೋದಕಂ ಅಸ್ತು – ಇತಿ ಪ್ರತಿ।

(1) ಶ್ರಾದ್ಧ ಮಾಡುವ ಸ್ಥಳದಲ್ಲಿ ಸ್ವಲ್ಪ ಮರಳನ್ನು ಅಥವಾ ರಂಗೋಲಿ ಪುಡಿಯನ್ನು ಎರಚಬೇಕು.

ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್ ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತುತೇಜಃ ಇದಂ ವೋ ಯಜ್ಞೋಪವೀತಂ ಸೂಪವೀತಂ ಪವಿತ್ರಂ ವಿನಾ ಗಂಧದ್ವಾರಾಂ ದುರಾಧರ್ಷಾಂ ನಿತ್ಯ ಪುಷ್ಪಾಂ ಕರೀಷಿಣೀಂ ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ । ಅಯಂ ವೋ ಗಂಧಃ । ಸುಗಂಧಃ । ಪವಿತ್ರಂಧೃತ್ವಾ । ಅಲಂಕರಣಾರ್ಥಮಿಮೇ ಅಕ್ಷತಾಃ । ಸ್ವಕ್ಷತಾಃ । ಮಾಲ್ಯಾರ್ಥಮಿಮಾನಿ ಶ್ರೀತುಲಸೀ ಭೃಂಗರಾಜ ಯೂಥಿಕಾಕುಶಾಗ್ರಾಣಿ ಸುಪುಷ್ಪಾಣಿ। ಸುಕುಶಾಗ್ರಾಣಿ। ಆಯಂ ವೋ ಧೂಪಃ। ಸುಧೂಪಃ। ಸೂರ್ಯಸ್ಥಿತಂ ವೋ ಜ್ಯೋತಿಃ । ಪವಿತ್ರಾರ್ಥಮಿಮೌ ಕುಶೌ । ಸುಕುಶೌ । ಅಷ್ಯಾರ್ಘ್ಯಾದಿ ಸಕಲಾರಾಧನೈಃ ಸ್ವರ್ಚಿತಮಸ್ತು। ಸ್ವರ್ಚಿತಂ ಇದಮರ್ಚನಂ ಸಂಪೂರ್ಣ ಮಸ್ತ್ವಿತಿ

ಭವಂತೋ ಬ್ರುವಂತು। ಸಂಪೂರ್ಣಂ। ಶತಮಾನಂ ಭವತಿ ಶತಾಯುಃ ಪುರಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠತಿ ಸ್ವಸ್ತಿ ಆಯುಷ್ಮಾನ್ ಭವ। ದೀರ್ಘಾಯುಷ್ಯ ಮಸ್ತು। ಉತ್ತರೋತ್ತರಾಭಿವೃದ್ಧಿರಸ್ತು – ಇತಿ ಆಶೀರ್ವಾದಃ। ಪ್ರಸಾದಂ ಗೃಹೀತ್ವಾ ಯುಷ್ಮದನುಜ್ಞಯಾ ಅಸ್ಮತ್ಪಿತೃ ಪಿತಾಮಹ ಪ್ರಪಿತಾಮಹಾನಾಮರ್ಚನಂ ಕರಿಷ್ಯೇ। ಕುರುಷ್ವ – ಇತಿ ಪ್ರತಿ। ಪ್ರಾಚೀನಾವೀತಿ ಅಸ್ಮತ್ಪಿತುಃ ಸಾಂವತ್ಸರಿಕ ಶ್ರಾದ್ಧೇ

ಅಸ್ಮತ್ಪಿತೃಪಿತಾಮಹಪ್ರಪಿತಾಮಹಾನ್, ---------- ಶರ್ಮಣಃ ---------- ಗೋತ್ರಾನ್ ---------- ರೂಪಾನ್ (ಅಸ್ಮನ್ಮಾತೃಪಿತಾಮಹೀ ಪ್ರಪಿತಾಮಹೀಃ, -----------ದೇವೀಃ, ------------ ಗೋತ್ರಾಃ, ------------ ರೂಪಾಃ,) ಭವತ್ಸ್ವ್ಯ ಆವಾಹಯಿಷ್ಯೇ। ಅಸ್ತುಆವಾಹಯ – ಇತಿಪ್ರತಿ। ದರ್ಭತಿಲ ಪುಷ್ಪಾಣಿ ಗೃಹೀತ್ವಾ–ಆಯಾತ ಪಿತರಃ ಸೋಮ್ಯಾ ಗಂಭೀರ್ಯೇಃ ಪಥಿಭಿಃ ಪೂರ್ವ್ಯೈಃ ಪ್ರಜಾಮಸ್ಮಭ್ಯಂ ದದತೋರಯಿಂಚ ದೀರ್ಘಾಯುತ್ವಂ ಚ ಶತಶಾರದಂ ಚ ಇತಿದರ್ಭಾದೀನ್ ವಿಪ್ರಪಾದಯೋಃ ಕ್ಷಿಪೇತ್। ಆವಾಹನಾರ್ಥಮುದಕಂ। ಅಸನಾರ್ಥಮಿದಂ ದ್ವಿಗುಣಭುಗ್ನಂ ದರ್ಭತ್ರಯಂ। ಆಸ್ಯತಾಂ ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತಃ। ಇದಂ ಸುಖಾಸನಂ। ಅಸ್ಮತ್‌ಪಿತುಃ ಸಾಂವತ್ಸರಿಕ ಶ್ರಾದ್ಧೇ ಅಸ್ಮತ್‌ಪಿತೃಪಿತಾಮಹಪ್ರಪಿತಾಮಹ್ಯೈಃ ಕ್ಷಣಃ ಕ್ರಿಯತಾಂ। ಅಸ್ತು– ಇತಿಪ್ರತಿ। ಅಥ ಅರ್ಚನಂ। ಇದಂ ವ್ಯೋಽರ್ಘ್ಯಂ ಅಸ್ತುಅರ್ಘ್ಯಂ ಆಚ್ಛಾದನಾರ್ಥಮಿದಂ ವಸ್ತ್ರಂ। ಸುವಸ್ತ್ರಂ। ಇದಂ ಹಸ್ತೋದಕಂ। ಅಸ್ತು। ಇದಂ ಧಾರಣಾರ್ಥಂ ಯಜ್ಞೋಪವೀತಂ। ಸೂಪವೀತಂ (ಪವಿತ್ರಂ ವಿನಾ) ಅಯಂ ವೋ ಗಂಧಃ। ಸುಗಂಧಃ। ಪವಿತ್ರಂಧೃತ್ವಾ। ಅಲಂಕರಣಾರ್ಥಮಿಮೇ ತಿಲಾಃ। ಸುತಿಲಾಃ। ಮಾಲ್ಯರ್ಥಮಿಮೇ ದೂರ್ವಾಂಕುರಾಃ। ಶ್ರೀ ತುಲಸೀ ಭೃಂಗರಾಜ ಯೂಥಿಕಾಪುಷ್ಪಾಣಿ। ಸುಪುಷ್ಪಾಣಿ। ಅಯಂ ವೋ ಧೂಪಃ। ಸುಧೂಪಃ। ಸೂರ್ಯಸ್ಥಿತಂ ವೋ ಜ್ಯೋತಿಃ। ಸುಜ್ಯೋತಿಃ। ಪವಿತ್ರಾರ್ಥಮಿಮೇ ಕುಶಾಃ। ಸುಕುಶಾಃ। ಅಪ್ಪಾರ್ಘ್ಯಾದಿ ಸಕಲಾರಾಧನೈಃ ಸ್ವರ್ಚಿತಮಸ್ತು। ಸ್ವರ್ಚಿತಂ। ಇದಮರ್ಚನಂ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು। ಸಂಪೂರ್ಣಂ। ಶತಮಾನಂ ಭವತಿ ಶತಾಯುಃ ಪುರುಷಃ ಶತೇಂದ್ರಿಯ

ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠತಿ । ಸ್ವಸ್ತಿ । ಆಯುಷ್ಮಾನ್ ಭವ । ದೀರ್ಘಾಯುಷ್ಯಮಸ್ತು। ಉತ್ತರೋತ್ತರಾಭಿವೃದ್ಧಿರಸ್ತು। – ಇತಿ ಆಶೀರ್ವಾದಃ

ಅಥ ಉಪವೀತೀ । ಯುಷ್ಮದನುಜ್ಞಯಾ ಮಂಡಲೋದ್ವರ್ತನಂ ಪಾತ್ರಾಸಾದನಂ ಚ ಕರಿಷ್ಯೇ । ಕುರುಷ್ವ – ಇತಿ ಪ್ರತಿ । ಸರ್ವಮನ್ನಾದಿ ದ್ರವ್ಯಂ ಗಾಯತ್ರ್ಯಾ ಪ್ರೋಕ್ಷ್ಯ ಶ್ರಾದ್ಧಭೂಮೌ ಚತುರಸ್ರ ಮಂಡಲಂ ಕೃತ್ವಾ ದರ್ಭಾನ್ ವಿಕೀರ್ಯ ತತ್ರ ಅನ್ನಪಾತ್ರಮಾನೀಯ ನಿಧಾಯ ಅನ್ನಪೂರ್ಣಪರಮೇಶ್ವರ್ಯೈ ನಮಃ ಸಕಲಾರಾಧನೈಃ ಸ್ವರ್ಚಿತ ಮಸ್ತು ಇತಿ ಸಂಪೂಜ್ಯ (ತದಾ ಕರ್ತುಃ ಪತ್ನೀ ಚ ಅನ್ನಪೂರ್ಣಾಂ ಸಂಪೂಜಯೇತ್) ದರ್ವ್ಯಾ ಅನ್ನಂ ದ್ವೇಧಾ ವಿಭಜ್ಯ । ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವಚ ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ । ಮಯಾ ಸಂಪಾದಿತಾಃ ಪದಾರ್ಥಾಃ ಶ್ರಾದ್ಧಹವಿರ್ಯೋಗ್ಯಾ ಭವಂತ್ವಿತಿ ಭವಂತೋ ಬ್ರುವಂತು। ಶ್ರಾದ್ಧಹವಿರ್ಯೋಗ್ಯಾ ಭವಂತು – ಇತಿಪ್ರತಿ। ವಿಷ್ಣೋಃ ವಿಶ್ವೇಷಾಂ ದೇವನಾಂ ಚ ಅಗ್ರೇ ಚತುರಸ್ರ ಮಂಡಲಂ ಕೃತ್ವಾ ಪೂರ್ವಾಗ್ರಾನ್ ದರ್ಭಾನ್ ನಿಧಾಯ ಅಕ್ಷತಾನ್ ವಿಕೀರ್ಯ ಪಿತೄಣಾಂ ವರ್ತುಲ ಮಂಡಲಂ ಕೃತ್ವಾ ದಕ್ಷಿಣಾಗ್ರಾನ್ ದರ್ಭಾನ್ ನಿಧಾಯ ತಿಲಾನ್ ವಿಕೀರ್ಯ ಭ್ಯೋಜನ ಪಾತ್ರಾಣಿ ಸಂಸ್ಥಾಪಯೇತ್ । ಘೃತೇನ ಅಭಿಘಾರ್ಯ ಸಂಪಾದಿತಂ ಪಾಕಂ ದೇವಪೂರ್ವಂ ಪರಿವೇಷಯೇತ್ ಅನಂತರಂ ಪುನರಭಿಘಾರ್ಯ । ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ದೀಮಹಿ। ಧಿಯೋ ಯೋನಃ ಪ್ರಚೋದಯಾತ್ ಇತಿ ಗಾಯತ್ರ್ಯಾ ಪರಿವೇಷ್ಟಿತಮನ್ನಂ ಪ್ರೋಕ್ಷ್ಯ ಮಹಾವಿಷ್ಣವೇ ಪ್ರಥಮಮರ್ಪಯೇತ್ । ಶ್ರೀ ಮಹಾವಿಷ್ಣವೇ ಸ್ವಾಹಾ ನಮಃ ಇದಂ ನ್ನ ಮಮ। ಅನ್ನಮ್ ಇತ್ಯುಕ್ತ್ವಾ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ನಮಃ ಇದಂ ನ ಮಮ । ಅನ್ನಂ । ಪ್ರಾಚೀನಾವೀತೀ ಪಿತೃಪಿತಾಮಹಪ್ರಪಿತಾಮಹೇಭ್ಯಃ . . . ಸ್ವಧಾನಮಃ ಇದಂ ನ್ನ ಮಮ ಅನ್ನಂ ಇತಿ ಸರ್ವತ್ರ ಅನ್ನಮಭಿಮೃಶ್ಯ । ಸರ್ವತ್ರ ಅಸ್ತು ಅನ್ನಂ ಇತಿ ಪ್ರತಿ । ಇದಮನ್ನಂ ಗಯಾಯಾಂ ಶ್ರೀರುದ್ರ ವಿಷ್ಣು ಪಾದಾದಿ ಸಮಸ್ತಪಾದೇಷು ದತ್ತಮಸ್ತು। ಅಸ್ತು – ಇತಿ ಪ್ರತಿ। ಶ್ರೀ ಗದಾಧರಃ ಪ್ರಿಯತಾಂ। ಸುಪ್ರೀಯತಾಂ – ಇತಿ ಪ್ರತಿ । ಓಂ ನಮೋ ನಾರಾಯಣಾಯ । ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ । ಬ್ರಹ್ಮೈವತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ ಇತಿ ಜಲಂ ಭೂಮೌ ವಿಸೃಜೇತ್ ।

ಉಪವೀತೀ । ಶ್ರೀ ಮಹಾವಿಷ್ಣುಃ ಪ್ರೀಯತಾಂ ಇತ್ಯುಕ್ತ್ವಾ (ಬಲಮಂಡಿಯನ್ನು ನೆಲಕ್ಕೆ ಊರಿ) ವಿಶ್ವೇದೇವ ಪಾತ್ರಂ ಗಾಯತ್ರ್ಯಾ ಪ್ರೋಕ್ಷ್ಯ ತೂಷ್ಣೀಂ ಪರಿಷಿಚ್ಯ, ಪುರೂರವಾದ್ರ್ರವ ಸಂಜ್ಞಕೇಭ್ಯೋಜ್ಯೈ ವಿಶ್ವೇಭ್ಯೋಜ್ಯೈ ದೇವೇಭ್ಯಃ ಸ್ವಾಹಾ ಇದಂ ವೋಕ್ತ್ವಾನ್ನಂ ನ್ಯುಬ್ಜೇನ ಕರೇಣ ವಿಪ್ರಸ್ಯನ್ಯುಬ್ಜಂ ದಕ್ಷಿಣಂ ಕರಂ ಗೃಹೀತ್ವಾ ವಿಪ್ರಸ್ಯ ಅನಖಭಾಗೇನ ಅಂಗುಷ್ಠೇನ ಅನ್ನಂ ಸ್ಪರ್ಶಯಿತ್ವಾ ಪ್ರದಕ್ಷಿಣಾಕಾರಂ ದ್ವಿಃ ಭ್ರಾಮಯೇತ್ ಇದಮನ್ನಂ ಸಪರಿಕರಂ (ತಾಯಿಯ ಶ್ರಾದ್ಧದಲ್ಲಿ) ಪರಿವಿಷ್ಟಂ ಪರಿವೇಕ್ಷಮಾಣಂ ಚ ಏತತ್ಸರ್ವಮಮೃತರೂಪಂ ವಿಶ್ವೇಭ್ಯೋಜ್ಯೈ ದೇವೇಭ್ಯಃ ಸ್ವಾಹಾ ಹವ್ಯಂ ನಮಮ। ಇತ್ಯುಕ್ತ್ವಾ ಭೂಮೌ ಅಕ್ಷತೋದಕಂ ನಿನೀಯ ಗದಾಧರಃ ಪ್ರೀಯತಾಂ । ಓಂ ನಮೋ ನಾರಾಯಣಾಯ । ಪುರೂರವಾದ್ರ್ರವ ಸಂಜ್ಞಕಾ ವಿಶ್ವೇದೇವಾಃ ಆತೃಪ್ತೇರ್ಯಥಾಸುಖಂ ಜುಷಧ್ವಂ । ಜುಷಾವಹೈ – ಇತಿ ಪ್ರತಿ ।

ಅಥ ಪ್ರಾಚೀನಾವೀತೀ (ಎಡಮಂಡಿಯನ್ನು ನೆಲಕ್ಕೆ ಊರಿ) ಪಿತೃಪಾತ್ರಂ ತಿಲೋದಕೇನ ಗಾಯತ್ರ್ಯಾ ಪ್ರೋಕ್ಷ್ಯ ಅಪಸವ್ಯಂ ಪರಿಷಿಚ್ಯ ಅಸ್ಮತ್ಪಿತೃಪಿತಾಮಹಪ್ರಪಿತಾಮಹೇಭ್ಯಃ ಸ್ವಧಾ ಇದಂ ವೋ ಪೂರ್ವವತ್‌ನ್ಯುಬ್ಜೇನ ಕರೇಣ ವಿಪ್ರಸ್ಯನ್ಯುಬ್ಜಂ ದಕ್ಷಿಣ ಕರಂ ಗೃಹೀತ್ವಾ ಅನ್ನಂ ಸ್ಪರ್ಶಯಿತ್ವಾ ಅಪ್ರದಕ್ಷಿಣಾಕಾರಂ ದ್ವಿಃ ಭ್ರಾಮಯೇತ್ । ಇದಮನ್ನಂ ಸಪರಿಕರಂ ಪರಿವಿಷ್ಟಂ ಪರಿವೇಕ್ಷ್ಯಮಾಣಂ ಚ ಏತತ್ಸರ್ವಮಮೃತರೂಪಂ ಅಸ್ಮತ್ಪಿತೃಪಿತಾಮಹಪ್ರಪಿತಾಮಹೇಭ್ಯಃ ಶರ್ಮಭ್ಯಃ – ಗೋತ್ರೇಭ್ಯಃ ವಸುರುದ್ರಾದಿತ್ಯರೂಪೇಭ್ಯಃ ಸ್ವಧಾ ಕವ್ಯಂ ನ ಮಮ ಇತ್ಯುಕ್ತ್ವಾ ಭೂಮೌ ಪಿತೃತೀರ್ಥೇನ ತಿಲೋದಕಂ ನಿನೀಯ । ಗದಾಧರಃ ಪ್ರೀಯತಾಂ । ಓಂ ನಮೋ ನಾರಾಯಣಾಯ । ಅಸ್ಮತ್ಪಿತೃಪಿತಾಮಹಪ್ರಪಿತಾಮಹಾಃ ಆತೃಪ್ತೇರ್ಯಥಾಸುಖಂ ಜುಷಧ್ವಂ। ಜುಷಾಮಹೈ – ಇತಿಪ್ರತಿ। (ಮಾತೃ ಶ್ರಾದ್ಧದಲ್ಲಿ ಅಸ್ಮನ್ಮಾತೃಪಿತಾಮಹೀ ಪ್ರಪಿತಾಮಹೀಭ್ಯಃ ಸ್ವಧಾಕವ್ಯಂ ಅಸ್ಮನ್ಮಾತೃ –––––– ಮಹ್ಯಃ ಆತೃಪ್ತೇಃ)

ಅಥ ಉಪವೀತೀ ಶ್ರೀ ಮಹಾವಿಷ್ಣವೇ ಹವಿರ್ನಿವೇದ್ಯ, ಬ್ರಾಹ್ಮಣೇಭ್ಯಃ ಆಪೋ ಶನಂ ದದ್ಯಾತ್ । ಅನೇನ ಪಿತೃಯಜ್ಞೇನ ಪಿತೃರೂಪೀ ಜನಾರ್ದನಃ ಪ್ರೀಯತಾಂ – ಇತಿಸಕುಶಾಕ್ಷತತಿಲಂ ಜಲಂ ಭೂಮೌ ವಿಸೃಜೇತ್ ಸರ್ವಮಮೃತಮಸ್ತು ಓಂ ತತ್‌ಸತ್ । ಬ್ರಾಹ್ಮಣಾಸ್ತು – ಅಮೃತೇ ಅಮೃತಂ

ಜುಹೋಮಿ ಅಮೃತೋಪಸ್ತರಣ ಮಸಿ ಸ್ವಾಹಾ – ಇತ್ಯಾಪೋಶನಂ ಪೀತ್ವಾ ಶ್ರದ್ಧಾಯಾಂ ಪ್ರಣೋ ನಿವಿಷ್ಟೋ ಮೃತಂ ಜುಹೋಮಿ। ಪ್ರಾಣಾಯ ಸ್ವಾಹಾ। ಶ್ರದ್ಧಾಯಾಮಪಾನೋ ನಿವಿಷ್ಟೋ ಮೃತಂ ಜುಹೋಮಿ ಅಪಾನಾಯ ಸ್ವಾಹಾ। ಶ್ರದ್ಧಾಯಾಂ ವ್ಯಾನೋ ನಿವಿಷ್ಟೋವ್ಯಾನಾಯ ಸ್ವಾಹಾ। ಬ್ರಹ್ಮಣೇ ಸ್ವಾಹಾ – ಇತಿ ಮುಖೇ ಅನ್ನಂ ಜುಹುಯುಃ। ಅಥ ಮೌನೇನ ಭುಂಜೀರನ್। ಅಥ ಕರ್ತಾ – ಕಾಲಾತ್ಯಯೋ ಜಾತಃ। ಸಾವಧಾನೇನ ಭ್ಯೋಕ್ತವ್ಯಂ। ಅಪೇಕ್ಷಿತಂ ಯಾಚಿತವ್ಯಂ। ಇತ್ಯಕ್ತ್ವಾ ಆಸನೇ ಸಮುಪವಿಶ್ಯ ಅನ್ನಸೂಕ್ತಂ, ಭಗವದ್ಗೀತಾಂ, ವಿಷ್ಣುಸಹಸ್ರನಾಮ, ಉಪನಿಷದಂ ವಾ ಪಠೇತ್

ಅಥ ಭುಕ್ತವತ್ಸು ವಿಪ್ರೇಷು ಅಸ್ಮತ್ಪಿತುಃ ಪ್ರತಿಸಾಂವತ್ಸರಿಕ ಶ್ರಾದ್ಧೇ ಪುರೂರವಾದ್ರ್ರವ ಸಂಜ್ಞಕಾ ವಿಶ್ವೇದೇವಾಃ, ತೃಪ್ತಾಃಸ್ಥ – ಇತಿ ಪೃಚ್ಛೇತ್। ತೃಪ್ತಾಃ ಸ್ಮಃ – ಇತಿಪ್ರತಿ। ಅಪಿಸಂಪನ್ನಂ। ಸುಸಂಪನ್ನಂ – ಇತಿಪ್ರತಿ। ಪ್ರಾಚೀನಾವೀತೀ। ಅಸ್ಮತ್ಪಿತುಃ ಪ್ರತಿಸಾಂವತ್ಸರಿಕ ಶ್ರಾದ್ಧೇ ಅಸ್ಮತ್। ಪಿತೃಪಿತಾಮಹಪ್ರಪಿತಾಮಹಾಃ, ತೃಪ್ತಾಃ ಸ್ಥ – ಇತಿಪೃಚ್ಛೇತ್। ತೃಪ್ತಾಃ ಸ್ಮಃ – ಇತಿಪ್ರತಿ। ಅಪಿ ಸಂಪನ್ನಂ। ಸುಸಂಪನ್ನಂ – ಇತಿಪ್ರತಿ। ಉಪವೀತೀ ಶ್ರೀ ಗದಾಧರಮೂರ್ತಯೇ ನಮಃ ನಿವೇದಿತಂ ಹವಿರುದ್ವಾಸಯಾಮಿ ಅಮೃತಾಪಿಧಾನಮಸಿ ಸ್ವಾಹಾ – ಇತ್ಯುಕ್ತ್ವಾ ಪಿತೃಪೂರ್ವಕ ಮುತ್ತರಾಪೋಶನಂ ದದ್ಯಾತ್। ವಿಪ್ರಾಸ್ತು ಮುಖಂ ಶೋಧಯಿತ್ವಾ, ಹಸ್ತೌಪಾದೌ ಚ ಪ್ರಕ್ಷಾಲ್ಯ, ದ್ವಿರಾಚಮ್ಯ, ಗಂಧಯುಕ್ತ ತುಲಸ್ಯಾ ಹಸ್ತ ಶುದ್ಧಿಂ ಕುರ್ಯುಃ। ಅಥ ಬಲಿಪ್ರದಾನಂ। ಪ್ರಾಚೀನಾವೀತೀ। ಬಲಿಸ್ಥಾಪನಾರ್ಥಮಿಮೆದರ್ಭಾಃ ಇತಿ ದಕ್ಷಿಣಾಗ್ರಾನ್ ದರ್ಭಾನ್ ಪ್ರಸ್ತಾರ್ಯ ದರ್ಭಾಣಾಮುಪರಿ ತಿಲೋದಕಂ ದತ್ವಾ ಸೋಪಸ್ಕರಾನ್ನ ಸಂಯುಕ್ತಂ ಪಾತ್ರಂ ತತ್ರ ನಿಧಾಯ ಅಸ್ಮತ್ ಪಿತುಃ ಪ್ರತಿಸಾಂವತ್ಸರಿಕಶ್ರಾದ್ಧೇ ಅಸ್ಮತ್ ಪಿತೃಪಿತಾಮಹಪ್ರಪಿತಾಮಹೇಭ್ಯಃ --------- ಶರ್ಮಭ್ಯಃ --------- ಗೋತ್ರೇಭ್ಯಃ, ವಸುರುದ್ರಾದಿತ್ಯರೂಪೇಭ್ಯಃ ಅಯಂ ಬಲಿಃ। ತಿಲೋದಕೇನ ತೃಪ್ತಿರಸ್ತು – ಇತಿ ತ್ರಿಸ್ತರ್ಪಯಿತ್ವಾ ಪಂಚಾಮೃತಮಾದಾಯ ಪಿತೃತೀರ್ಥೇನ ಪೂರ್ವವತ್ ತ್ರಿಸ್ತರ್ಪಯೇತ್। ಅಥ ಯುಷ್ಮದನುಜ್ಞಯಾ ಪಾತ್ರಚಾಲನಂ ಕರಿಷ್ಯೇ। ಚಾಲಯ – ಇತಿಪ್ರತಿ। ಇಮಂ ಬಲಿಂ ವಾಯುಸೇಭ್ಯಃ ಉಪಹರತಿ। ವಾಯಸಾಭಾವೇ ತಟಾಕೇ ನದ್ಯಾಂ ವಾ ಜಲೇ ವಿಸೃಜೇತ್। ತದಭಾವೇ ಲೌಕಿಕಾಗ್ನೌ ಪ್ರಕ್ಷಿಪೇತ್।

ಭೂಮೌ ವಾ ನಿಖನೇತ್ ।

ಅನಂತರಂ ಹಸ್ತೌಪಾದೌ ಚ ಪ್ರಕ್ಷಾಲ್ಯ, ಉಪವೀತೀ ದ್ವಿರಾಚಮ್ಯ ಅನೇನ ಬ್ರಾಹ್ಮಣ ಭೋಜನೇನ ಬಲಿಪ್ರದಾನೇನ ಚ ಅಸ್ಮತ್‌ಪಿತುಃ (ಅಸ್ಮನ್ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧಂ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು । ಸಂಪೂರ್ಣಂ ಇತಿಪ್ರತಿ। ಅಕ್ಷಯ್ಯಮಸ್ತ್ವಿತಿ ಭವಂತೋ ಬ್ರುವಂತು। ಅಕ್ಷಯ್ಯಮಸ್ತು – ಇತಿಪ್ರತಿ। ಫಲಹಿರಣ್ಯ ತಾಂಬೂಲ ಸಹಿತಂ ಪಾತ್ರಂ ಗೃಹೀತ್ವಾ ಇದಂ ಸ್ವೀಕೃತ್ಯ ಅಸ್ಮತ್‌ಪಿತುಃ ಪ್ರತಿ ಸಾಂವಸ್ತರಿಕ ಶ್ರಾದ್ಧ ಸಂಪೂರ್ಣತಾ ಫಲಾ ವಾಪ್ತಿರಸ್ತು– ಇತಿ ಭವಂತೋ ಬ್ರುವಂತು। ತಥಾಸ್ತು। ಸಂಪೂರ್ಣತಾಫಲಾವಾಪ್ತಿರಸ್ತು– ಇತಿಪ್ರತಿ।

। ತಾಂಬೂಲಾದಿಕಂ ಬ್ರಾಹ್ಮಣೇಭ್ಯೋ ದದ್ಯಾತ್ । ಬ್ರಾಹ್ಮಣಾಸ್ತು ಆಶಿಷಂ ಪ್ರಯುಂಜತೇ । ಆಶೀರ್ಮಂತ್ರಃ – ಓಂ ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ । ಶಿವೇನೋ ದ್ಯಾವಾಪೃಥಿವೀ ಅನೇಹಸಾ। ಪೂಷಾನಃ ಪಾತುದುರಿತಾದೃತಾವೃಧೋ ರಕ್ಷಾ ಮಾಕೀರ್ಣೋ ಅಘಶಸ ಈಶತ ವಸವಸ್ತ್ವಾ ರುದ್ರೈಃ ಪುರಸ್ತಾತ್‌ಪಾಂತು ಪಿತರಸ್ತ್ವಾಯಮರಾಜಾನಃ ಪಿತೃಭಿರ್ದಕ್ಷಿಣತಃ ಪಾಂತ್ವಾದಿತ್ಯಾಸ್ತ್ವಾ ವಿಶ್ವೇರ್ದೇವೈಃ ಪಶ್ಚಾತ್ ಪಾಂತು । ದ್ಯುತಾಸತ್ತ್ವಾ ಮಾಮತೋ ಪುರುಚ್ಛಿರುತ್ತರತಃಪಾತು ದೇವಾಸ್ತ್ವೇಂದ್ರ ಜ್ಯೇಷ್ಠ ವರುಣರಾಜಾನೋ ಧಸ್ತಾಚ್ಛೋಪರಿಷ್ಟಾಚ್ಚ ಪಾಂತು । ಯೇನ ದೇವಾ ಜ್ಯೋತೀಷೋ ಧ್ರ್ವಾ ಉದಾಯನ್ ಯೇನಾದಿತ್ಯಾ ವಸವೋ ಯೇನ ರುದ್ರಾಃ। ಯೇನಾಂಗಿರಸೋ ಮಹಿಮಾನಮಾನಶುಸ್ತೇನೈತು ಯಜಮಾನಃ ಸ್ವಸ್ತಿ। ಯೋ ವೈತಾಂ ಬ್ರಹ್ಮಣೋವೇದ ಅಮೃತೇನಾವೃತಾಂ ಪುರೀಂ। ತಸ್ಮೈಬ್ರಹ್ಮ ಚ ಬ್ರಹ್ಮಾಚ ಆಯುಃ ಕೀರ್ತಿಂ ಪ್ರಜಾಂ ದಧುಃ। ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ । ಪ್ರಯಚ್ಛಂತು ತಥಾರಾಜ್ಯಂ ಪ್ರೀತಾ ಯುಷ್ಮತ್‌ಪಿತಾಮಹಾಃ। ಸತ್ಯಾ ಏತಾ ಆಶಿಷಃ ಸಂತು। ಇತಿ ಮಂತ್ರಾಕ್ಷತಾನ್ ದದ್ಯುಃ । ಕರ್ತಾ ನಮಸ್ಕಾರಪೂರ್ವಕಂ ಸ್ವೀಕೃತ್ಯ ಶ್ರಾದ್ಧಶೇಷೈಃಕಿಂ ಕ್ರಿಯತಾಂ? – ಇತಿಪೃಚ್ಛೇತ್ । ಇಷ್ಟೈಃ ಸಹ ಭುಜ್ಯತಾಂ – ಇತಿಪ್ರತಿ ।

ಅಥ ಯುಷ್ಮದನುಜ್ಞಯಾ ಪಿತೄನುದ್ವಾಸಯಾಮಿ । ಅಸ್ತು ಉದ್ವಾಸಯ – ಇತಿಪ್ರತಿ । ಪ್ರಾಚೀನಾವೀತೀ । ದರ್ಭದ್ವಯಂ ಗೃಹೀತ್ವಾ ಉತ್ತಿಷ್ಠತ ಪಿತರಃ ಪ್ರೇತ ಶೂರಾ ಯಮಸ್ಯ ಪಂಥಾ ಮನುಯಾತಾ ಪುರಾಣಂ ಧತ್ತಾದಸ್ಮಾಸು ದ್ರವಿಣಂ ಯಚ್ಛ

ಭದ್ರಂ ಪ್ರಣೋ ಬ್ರೂತಾದ್ಭಾಗಧಾಂ ದೇವತಾಸು । ಅಸ್ಮತ್ ಪಿತೃಪಿತಾಮಹ ಪ್ರಪಿತಾಮಹಾನ್ ------------- ಶರ್ಮಣಃ ಗೋತ್ರಾನ್, ವಸುರುದ್ರಾದಿತ್ಯರೂಪಾನ್ ಉದ್ವಾಸಯಾಮಿ । (ಅಸ್ಮನ್ಮಾತೃ ಪಿತಾಮಹೀ ಪ್ರಪಿತಾಮಹೀಃ, ----------- ದೇವೀಃ, --------- ಗೋತ್ರಾಃ, ವಸುರುದ್ರಾದಿತ್ಯರೂಪಾಃ) ಉಪವೀತೀ ಪುರೂರವಾರ್ದ್ರವಸಂಜ್ಞಕಾನ್ ವಿಶ್ವಾನ್ ದೇವಾನುದ್ವಸಯಾಮಿ । ಪ್ರಾಚೀನಾವೀತೀ । ಉತ್ತಿಷ್ಠಂತು ಪಿತರೋ ವಿಶ್ವೈರ್ದೇವೈಃ ಸಹ – ಇತಿ ದರ್ಭದ್ವಯೇನ ಪಿತೃಪೂರ್ವಂ ವಿಪ್ರಾನ್ ಸ್ಪಶನ್‌ವಿಸೃಜೇತ್ । ದರ್ಭದ್ವಯಂ ದೂರತಃ ಕ್ಷಿಪೇತ್ ।

ಅಥ ಉಪವೀತೀ ದೇವಾಗ್ರೇ ಉಪವಿಶ್ಯ ತಾಂಬೂಲಂ ನಿವೇದ್ಯ ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು । ನೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ । ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ । ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ । ಶ್ರಾದ್ಧಮಧ್ಯೇ ಸ್ವರವರ್ಣಮಂತ್ರ ತಂತ್ರ ಲೋಪ ದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯಜಪಂ ಕರಿಷ್ಯೇ । ಓಂ ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಇತಿ ತ್ರಿರುಕ್ತ್ವಾ, ದೇವಸ್ಯ ನೀರಾಜನಂ ಕೃತ್ವಾ, ಅನೇನ ಮಯಾ ಕೃತ ಬ್ರಾಹ್ಮಣ ಭೋಜನ ಬಲಿಪ್ರದಾನ ರೂಪೇಣ ಅಸ್ಮತ್ಪಿತುಃ (ಅಸ್ಮನ್ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧಕರ್ಮಣಾ ಭಗವಾನ್ ಸರ್ವಾತ್ಮಕಃ ಶ್ರೀ ಮಹಾವಿಷ್ಣುಃ ಪ್ರೀಯತಾಂ । ಇತಿ ಜಲಂ ವಿಸೃಜೇತ್ ॥

ಅಥ ಬ್ರಾಹ್ಮಣಾಗ್ರೇ ಸ್ಥಿತ್ವಾ ಸಾಂಜಲಿಬಂಧಂ ಅದ್ಯಮೇ ಸಫಲಂ ಜನ್ಮ ಭವತ್ಪಾದಾಬ್ಜ ವಂದನಾತ್ । ಅದ್ಯ ಮೇ ವಂಶಜಾಃ ಸರ್ವೇ ಯಾತಾ ವೋ ನುಗ್ರಹಾದ್ದಿವಂ । ಪತ್ರಶಾಕಾದಿದಾನೇನ ಕ್ಲೇಶಿತಾ ಯೂಯಮೀದೃಶಂ ತತ್‌ಕ್ಲೇಶಜಾತಂ ಚಿತ್ತೇತು ವಿಸ್ಮೃತ್ಯ ಕ್ಷಂತುಮರ್ಹಥ ಇತಿ ಕ್ಷಮಾಪಯಿತ್ವಾ ಉತ್ತಿಷ್ಠಂತು ಬ್ರಾಹ್ಮಣೋತ್ತಮಾಃ। ಇತ್ಯುಕ್ತ್ವಾ ಅಷ್ಟೌ ಪದಾನಿ ಅನುವ್ರಜ್ಯ ಆಗತ್ಯ ಕೃತಕಟಿಬಂಧನಂ ವಿಸ್ರಂಸಯೇತ್ । ಪವಿತ್ರಂ ವಿಸೃಜ್ಯ ದ್ವಿರಾಚಾಮೇತ್ । ತತಶ್ಚ ಉಚ್ಛಿಷ್ಟೋದ್ವಾಸಂ ಅಥ ಪಿತೃನಿಷೇವಿತ ಮಿಷ್ಟೈಃ ಸಹ ಭುಂಜೀತ ಇತಿ ಶ್ರಾದ್ಧಪ್ರಯೋಗೇ ಪ್ರಥಮೋನುಕಲ್ಪಃ ॥

## ಶ್ರಾದ್ಧಾಂಗ ತರ್ಪಣ

ಶ್ರಾದ್ಧವನ್ನು ಮಾಡಿದ ಮಾರನೆಯ ದಿನ ಪ್ರಾತಃಕಾಲ ಶ್ರಾದ್ಧಾಂಗತರ್ಪಣವನ್ನು ಕೊಡಬೇಕು. ತರ್ಪಣವನ್ನಿತ್ತಮೇಲೆ ಶ್ರಾದ್ಧವು ಸಮಾಪ್ತವಾಯಿತೆಂದು ತಿಳಿಯತಕ್ಕದ್ದು. ಪಿತೃಶ್ರಾದ್ಧದಲ್ಲಿ ಉದ್ದಿಷ್ಟರಾದ ಮೂವರು ಪಿತೃವರ್ಗದವರಿಗೂ, ಮಾತೃಶ್ರಾದ್ಧದಲ್ಲಿ ಉದ್ದಿಷ್ಟರಾದ ಮೂವರು ಮಾತೃ ವರ್ಗದವರಿಗೂ ಮಾತ್ರ ಈ ತರ್ಪಣವು ಸಲ್ಲುತ್ತದೆ. ಯಾರ ತಂದೆ ಬದುಕಿದ್ದಾನೋ ಅಂತಹ ಜೀವತ್ ಪಿತೃಕನೂ ಶ್ರಾದ್ಧಾಂಗತರ್ಪಣವನ್ನು ಕೊಡಬೇಕು. ಆದರೆ ಆತನು ತಿಲಮಿಶ್ರವಾಗಿ ತರ್ಪಣವನ್ನು ಕೊಡಬಾರದು. ಕೇವಲ ಜಲದಿಂದ ಕೊಡಬೇಕು. ಉಳಿದವರು ತಿಲಮಿಶ್ರವಾಗಿ ಕೊಡತಕ್ಕದ್ದು. ತಿಲವೆಂದರೆ ಕಪ್ಪು ಎಳ್ಳು. ಬಿಳಿಯ ಎಳ್ಳಲ್ಲ. ಬೆಳಿಗ್ಗೆ ಸ್ನಾನಮಾಡಿ ಸಂಧ್ಯಾವಂದನೆಗೆ ಮೊದಲು ಅಥವಾ ಅನಂತರ ತರ್ಪಣವನ್ನು ಕೊಡಬಹುದು.

## ತರ್ಪಣ ವಿಧಿ

ಆಚಮ್ಯ ಪ್ರಾಣಾನಾಯಾಮ್ಯ ಪವಿತ್ರಂ ಧೃತ್ವಾ (ಹಿಂದಿನ ದಿನ ಬಳಸಿದ ಪವಿತ್ರವನ್ನು ಉಪಯೋಗಿಸಬಹುದು) ದೇಶಕಾಲೌ ಸಂಕೀರ್ತ್ಯ ಪೂರ್ವೇದ್ಯುಃ ಮಯಾ ಕೃತ ಪ್ರತಿಸಾಂವತ್ಸರಿಕ ಪಿತೃಶ್ರಾದ್ಧಾಂಗತಯಾ ವಿಹಿತಂ ತರ್ಪಣಮದ್ಯ ಕರಿಷ್ಯೇ ಇತಿ ದಕ್ಷಿಣಾಭಿಮುಖಃ ಪ್ರಾಚೀನಾವೀತೀ

1. ಅಸ್ಮತ್ ಪಿತರಂ, – ಶರ್ಮಾಣಂ, – ಗೋತ್ರಂ, ವಸುರೂಪಂ ಸ್ವಧಾ ನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (ಇತಿ ತ್ರಿಸ್ತ್ರಿಃ ತರ್ಪಯೇತ್)
2. ಅಸ್ಮತ್ ಪಿತಾಮಹಂ, – ಶರ್ಮಾಣಂ, – ಗೋತ್ರಂ, ರುದ್ರರೂಪಂ ಸ್ವಧಾ ನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ ।
3. ಅಸ್ಮತ್ ಪ್ರಪಿತಾಮಹಂ, – ಶರ್ಮಾಣಂ, – ಗೋತ್ರಂ, ಆದಿತ್ಯರೂಪಂ ಸ್ವಧಾ ನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ ।

ಅನೇನ ಮಯಾ ಕೃತ ಶ್ರಾದ್ಧಾಂಗ ತರ್ಪಣ ಕರ್ಮಣಾ ಅಸ್ಮತ್

ಪಿತೃಪಿತಾಮಹಪ್ರಪಿತಾಮಹಾಃ ಪ್ರೀಯಂತಾಂ ಇತಿ ಜಲಂ ವಿಸೃಜ್ಯ ಆಚಮ್ಯ ಪವಿತ್ರಂ ವಿಸ್ರಸ್ಯ ವಿಸೃಜೇತ್ ॥

ತಾಯಿಯ ಶ್ರಾದ್ಧವಾದರೆ ಇದೆ ಕ್ರಮದಲ್ಲಿ ಊಹಿಸಿಕೊಳ್ಳಬೇಕು.

1. ಅಸ್ಮನ್ಮಾತರಂ, – ದೇವೀಂ, – ಗೋತ್ರಾಂ, ವಸುರೂಪಾಂ ಸ್ವಧಾ ನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ (ಇತಿ ತ್ರಿಸ್ತ್ರಃ ತರ್ಪಯೇತ್)

2. ಅಸ್ಮತ್‌ಪಿತಾಮಹೀ, – ದೇವೀಂ, – ಗೋತ್ರಾಂ, ರುದ್ರರೂಪಾಂ ಸ್ವಧಾ ನಮಸ್ತರ್ಪಯಾಮಿ ತರ್ಪಯಾಮಿ, ತರ್ಪಯಾಮಿ ।

3. ಅಸ್ಮತ್ ಪ್ರಪಿತಾಮಹೀಂ, – ದೇವೀಂ, – ಗೋತ್ರಾಂ, ಆದಿತ್ಯರೂಪಾಂ ಸ್ವಧಾ ನಮಸ್ತರ್ಪಯಾಮಿ, ತರ್ಪಯಾಮಿ, ತರ್ಪಯಾಮಿ ।

ಅನೇನ ಮಯಾಕೃತ ಶ್ರಾದ್ಧಾಂಗ ತರ್ಪಣ ಕರ್ಮಣಾ ಅಸ್ಮನ್ಮಾತೃ ಪಿತಾಮಹೀ ಪ್ರಪಿತಾಮಹ್ಯಃ ಪ್ರೀಯಂತಾಂ । ಇತಿ ಜಲಂ ವಿಸೃಜ್ಯ, ಆಚಮ್ಯ ಪವಿತ್ರಂ ವಿಸ್ರಸ್ಯ ವಿಸೃಜೇತ್

ಶ್ರಾದ್ಧದ ದಿನವೇ ಈ ತರ್ಪಣವನ್ನು ಕೊಟ್ಟು ಮುಗಿಸುವ ಪದ್ಧತಿಯೂ ಉಂಟು. ಆಗ ಬ್ರಾಹ್ಮಣರನ್ನು ಬೀಳ್ಕೊಂಡ ಮೇಲೆ ಪವಿತ್ರವನ್ನು ತೆಗೆಯುವುದಕ್ಕೆ ಮೊದಲೇ ತಿಲತರ್ಪಣವನ್ನು ಕೊಡಬೇಕು. ಸಂಕಲ್ಪದಲ್ಲಿ ಪರೇದ್ಯುಃ ಕರ್ತವ್ಯಂ ತರ್ಪಣವಿಧಿಂ ದೇಶಕಾಲಾದಿದೋಷಸಂಭವಶಂಕಯಾ ಅದ್ಯೈವ ಕರಿಷ್ಯೇ ಎಂದು ಹೇಳಬೇಕು. ಉಳಿದದ್ದೆಲ್ಲವೂ ಸಮಾನ.

**ವಿಶೇಷ ಸೂಚನೆ**

ಜೀವತ್‌ಪಿತೃಕನೂ ಸಹ ಶ್ರಾದ್ಧಾಂಗತರ್ಪಣವನ್ನು ಕೊಡಬೇಕೆಂದೂ ಆದರೆ ತಿಲಮಿಶ್ರವಾಗಿ ಕೊಡಬಾರದೆಂದೂ ಹೇಳಿದ್ದಾಗಿದೆ. ಆತನಿಗೆ ಶ್ರಾದ್ಧ ಕಾಲದಲ್ಲಿ ಕಟಿಬಂಧವೂ ಮುಂಡಿಯನ್ನೂರುವುದೂ ನಿಷಿದ್ಧ.

(1) ಶ್ರಾದ್ಧಾಂಗ ತರ್ಪಣವನ್ನು ಅಂಜಲಿಯಿಂದ (ಎರಡು ಕೈಗಳಿಂದಲೂ) ಕೊಡಬೇಕೆಂದೂ, ಋಗ್ವೇದಿಗಳು ಮಾತ್ರ ಬಲಗೈಯಿಂದ ಕೊಡಬೇಕೆಂದೂ ಧರ್ಮಸಿಂಧುವಿನಲ್ಲಿಯೂ ನಿರ್ಣಯ ಸಿಂಧುವಿನಲ್ಲಿಯೂ ಹೇಳಿದೆ. ಈ ತರ್ಪಣ ಪಿತೃ ತೀರ್ಥದಿಂದ – ಎಂಬುದಕ್ಕೆ ಆಧಾರ ದೊರೆಯಲಿಲ್ಲ.

**ಅನುಕಲ್ಪ - 2**

ಮೇಲ್ಕಂಡ 1 ನೇ ಅನುಕಲ್ಪದಲ್ಲಿ ಇಬ್ಬರು ಬ್ರಾಹ್ಮಣರು ಬೇಕಾಗುತ್ತಾರೆ. ಹಾಗಲ್ಲದೆ ಒಬ್ಬನೇ ಬ್ರಾಹ್ಮಣನು ದೊರಕಿದಲ್ಲಿ ಆತನನ್ನು ಪಿತೃ ಸ್ಥಾನದಲ್ಲಿ ಕುಳ್ಳಿರಿಸಿ, ಪಿತೃ ವರ್ಗವನ್ನು ಆವಾಹನೆ ಮಾಡಬೇಕು. ವಿಶ್ವೇದೇವರ ಸ್ಥಾನದಲ್ಲಿ ದರ್ಭೆಯ ವಟುಕವನ್ನಿಟ್ಟು, ಅದರಲ್ಲಿ ವಿಶ್ವೇದೇವರನ್ನು ಆವಾಹಿಸತಕ್ಕದ್ದು. ವಿಷ್ಣು ಸ್ಥಾನದಲ್ಲಿ ಸಾಲಿಗ್ರಾಮವಿರುತ್ತದೆ. ಎಲ್ಲ ವಿಧಿಗೂ ಹಿಂದಿನಂತೆ ವಿಶ್ವೇದೇವರಿಗಿಟ್ಟು ದಕ್ಷಿಣೆಯನ್ನು ಆ ಒಬ್ಬ ಬ್ರಾಹ್ಮಣನಿಗೇ ಅರ್ಪಿಸತಕ್ಕದ್ದು.

ಒಬ್ಬ ಬ್ರಾಹ್ಮಣನೂ ದೊರಕದ ಪಕ್ಷದಲ್ಲಿ ಪಿತೃಸ್ಥಾನಕ್ಕೂ ಸಹ ದರ್ಭೆಯ ವಟುಕವನ್ನಿಟ್ಟು, ಶ್ರಾದ್ಧ ಮಾಡಬಹುದು. ಇದಕ್ಕೆ ಚಟಕ ಶ್ರಾದ್ಧವೆನ್ನುತ್ತಾರೆ. ಭೋಜನ ಮಾಡಿಸಲು ಸೌಕರ್ಯವಿಲ್ಲವಾದ ಆಮದ್ರವ್ಯಗಳಿಂದ ಮಾಡಬಹುದು. ಆಮದ್ರವ್ಯವೆಂದರೆ ಬೇಯಿಸದಿರುವ ಅಕ್ಕಿ, ಬೇಳೆ ಮೊದಲಾದದ್ದು. ಅದಕ್ಕೂ ಲೋಪ ಬಂದಾಗ ಹಿರಣ್ಯ ಶ್ರಾದ್ಧವನ್ನು ಹೇಳಲಾಗಿದೆ. ಕೇವಲ ದಕ್ಷಿಣೆಯನ್ನಿಟ್ಟು ಮಾಡುವ ಶ್ರಾದ್ಧವಿದು. ಇವೆಲ್ಲವನ್ನೂ ಪೂರ್ವೋಕ್ತವಿಧಿ ಪೂರ್ವಕವಾಗಿ ಮಾಡಲು ಶಕ್ತಿಯಿಲ್ಲದವರಿಗಾಗಿ ಸುಲಭವಾದ ಅನುಕಲ್ಪಗಳನ್ನು ಮುಂದೆ ಬರೆಯಲಾಗಿದೆ.

**ಅನುಕಲ್ಪ - 3**

ಇದನ್ನು ಗಂಧಾಕ್ಷತೆ ಎನ್ನುತ್ತಾರೆ. ಮುಪ್ಪು, ರೋಗ ಮುಂತಾದ ಆಪತ್ಕಾಲದಲ್ಲಿ ಭೋಜನ ಸೌಕರ್ಯವಿದ್ದವರು ಇದನ್ನಾಚರಿಸುವ ಪದ್ಧತಿ ಇದೆ. ಶ್ರಾದ್ಧ ಭೋಜನಕ್ಕೆ ಒಬ್ಬ ಬ್ರಾಹ್ಮಣನನ್ನು ನಿಮಂತ್ರಿಸಬೇಕು. ಸಂಕಲ್ಪಪೂರ್ವ ಬ್ರಾಹ್ಮಣಾರ್ಚನೆ ಮುಖ್ಯವಾದ್ದು.

## ಗಂಧಾಕ್ಷತ ವಿಧಿ

ಆಚಮ್ಯ ಪ್ರಾಣಾನಾಯಮ್ಯ ಪವಿತ್ರಂ ಧೃತ್ವಾ ದೇಶಕಾಲೌ ಸಂಕೀರ್ತ್ಯ ಅಸ್ಮಿನ್ ದಿನೇ ಅಸ್ಮತ್‌ಪಿತುಃ (ಅಸ್ಮನ್ಮಾತುಃ) ಪ್ರತಿ ಸಾಂವತ್ಸರಿಕ ಶ್ರಾದ್ಧಂ ವಿಸ್ತರೇಣ ಕರ್ತು ಮಶಕ್ತೋ ಹಂ, ಅಸ್ಮತ್‌ಪಿತೃಪಿತಾಮಹ ಪ್ರಪಿತಾಮಹಾನಾಂ, – ಗೋತ್ರಾಣಾಂ, – ಶರ್ಮಣಾಂ (ಅಸ್ಮನ್‌ಮಾತೃ – ಪಿತಾಮಹೀ – ಪ್ರಪಿತಾಮಹೀನಾಂ, – ಗೋತ್ರಾಣಾಂ, ---------- ದೇವೀನಾಂ) ಪ್ರೀತ್ಯರ್ಥಂ ಶ್ರಾದ್ಧಸ್ಥಾನೇ ಶ್ರೀಮಹಾವಿಷ್ಣುಸ್ವರೂಪಿ ಬ್ರಾಹ್ಮಣಾರಾಧನಾಖ್ಯಂ ಕರ್ಮ ಕರಿಷ್ಯೆ ಇತಿ ಸಂಕಲ್ಪ್ಯ। ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋ ಪಿವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ । ಇತ್ಯಾತ್ಮಾನಂ ಪ್ರೋಕ್ಷ್ಯ। ವಿಷ್ಣೋ ವಿಷ್ಣೋ ವಿಷ್ಣೋ – ಇತಿ ವಿಷ್ಣುಂ ಧ್ಯಾತ್ವಾ । ಶ್ರೀ ಮಹಾವಿಷ್ಣುಸ್ವರೂಪಿಣಂ ಬ್ರಾಹ್ಮಣಂ ತ್ವಾಮಾರಾಧಯಿಷ್ಯೇ ಇತಿ ವಿಪ್ರಹಸ್ತೇ ಹಸ್ತೋದಕಂ ದದ್ಯಾತ್ । ಆರಾಧಯ – ಇತಿ ಪ್ರತಿವಚನಂ । ಇದಮಾಸನಂ – ಇತಿ ದರ್ಭದ್ವಯಂ ಬ್ರಾಹ್ಮಣಸ್ಯ ದಕ್ಷಿಣ ಪಾರ್ಶ್ವೇ ನಿಧಾಯ । ಇದಮರ್ಘ್ಯಂ – ಇತಿ ಜಲಂದತ್ವಾ । ಪವಿತ್ರ ಮುನ್ಮುಚ್ಯ ಇದಂ ಪಾದ್ಯಂ – ಇತಿ ವಿಪ್ರಪಾದೌ ಪ್ರಕ್ಷಾಲ್ಯ ಪವಿತ್ರಂಧೃತ್ವಾ। ಇದಂ ಪುನರರ್ಘ್ಯಂ। ಇದ ಮಾಚಮನಂ। ಇದಂ ವಸ್ತ್ರಂ। ಪವಿತ್ರಮುನ್ಮುಚ್ಯ, ಅಯಂ ಗಂಧಃ । ಪುನಃ ಪವಿತ್ರಂ ಧೃತ್ವಾ । ಇದಂ ಯಜ್ಞೋಪವೀತಂ । ಇಮೇ ಅಕ್ಷತಾಃ । ಇಮಾನಿ ಪುಷ್ಪಾಣಿ । ಅಯಂಧೂಪಃ ಇತಿ ತತ್ತದ್ ದ್ರವ್ಯಾಣಿ ಬ್ರಾಹ್ಮಣಾಯ ಸಮರ್ಪಯೇತ್ । ತತಶ್ಚ ಇದಮನ್ನಂ ಮೋನೈವೇದ್ಯಂ ಇತ್ಯನ್ನೋಪರಿ ಜಲಂ ಕ್ಷಿಪ್ತ್ವಾ। ಇದಂ ನೀರಾಜನಂ ಇತಿ ಕರ್ಪೂರ ನೀರಾಜನಂ ಕೃತ್ವಾ। ಅಸ್ಮತ್ಪಿತುಃ ಪ್ರತಿ ಸಾಂವತ್ಸರಿಕ ಶ್ರಾದ್ಧೇ ಅಸ್ಮತ್‌ಪಿತೃ – ಪಿತಾಮಹ–ಪ್ರಪಿತಾಮಹ ಪ್ರೀತ್ಯರ್ಥಂ (ಅಸ್ಮನ್ಮಾತುಃ ಪ್ರತಿ ಸಾಂವತ್ಸರಿಕ ಶ್ರಾದ್ಧೇ ಅಸ್ಮನ್ಮಾತೃ – ಪಿತಾಮಹೀ – ಪ್ರಪಿತಾಮಹೀ ಪ್ರೀತ್ಯರ್ಥಂ) ಶ್ರೀ ಮಹಾವಿಷ್ಣು ಸ್ವರೂಪಿಣೇ ಬ್ರಾಹ್ಮಣಾಯ ಯಥಾಶಕ್ತಿ ಹಿರಣ್ಯದಾನಂ ಕರಿಷ್ಯೇ । ಇತಿ ಸಂಕಲ್ಪಯ ಫಲತಾಂಬೂಲಹಿರಣ್ಯಾನಿ ಪಾತ್ರೇ ನಿಧಾಯ ಬ್ರಾಹ್ಮಣಾಯ ದತ್ವಾ ನಾಮ ಗೋತ್ರ ಕೀರ್ತನಪೂರ್ವಕ ಮಭಿವಾದಯೇತ್ । ಬ್ರಾಹ್ಮಣಸ್ತು ಆಶಿಷಂ ಪ್ರಯುಂಜೀತ । ತತಃ ವಿಪ್ರಾಯ ಆಪೋಶನಂ ದತ್ವಾ ಶ್ರೀಕೃಷ್ಣಾರ್ಪಣಮಸ್ತು। ಶ್ರೀ ಗದಾಧರಃ ಪ್ರೀಯತಾಂ। ಮಮ ಪಿತರಃ ಪ್ರೀಯಂತಾಂ ಇತಿ ಜಲಂ ಭೂಮೌಕ್ಷಿಪೇತ್

ಆಮೇಲೆ 1ನೆಯ ಅನುಕಲ್ಪದಲ್ಲಿ ಹೇಳಿದಂತೆ ಪ್ರಾಚೀನಾವೀತಿಯಾಗಿ ಬಲಿಪ್ರದಾನವನ್ನು ಮಾಡತಕ್ಕದ್ದು. ಶ್ರಾದ್ಧಾಂಗ ತರ್ಪಣವನ್ನಿತ್ತು ಜೊತೆಗೆ ತಾನೂ ಭೋಜನ ಮಾಡಬಹುದು.

ವಿಶೇಷ ಸೂಚನೆ:

ಬ್ರಾಹ್ಮಣಭೋಜನವಿರುವ ಎಲ್ಲಾ ಅನುಕಲ್ಪಗಳಲ್ಲಿಯೂ ಬಲಿಪ್ರದಾನವೂ ಶ್ರಾದ್ಧಾಂಗ ತರ್ಪಣವೂ ಇರುತ್ತವೆ.

**ಅನುಕಲ್ಪ - 4**

**ಸಂಕ್ಷಿಪ್ತ ಆಮಶ್ರಾದ್ಧ ವಿಧಿ**

ಆಚಮ್ಯ ಪ್ರಾಣಾನಾಯಮ್ಯ ಪವಿತ್ರಂಧೃತ್ವಾ ದೇಶಕಾಲೌ ಸಂಕೀರ್ತ್ಯ ಅಸ್ಮಿನ್ ದಿನೇ ಅಸ್ಮತ್‌ಪಿತುಃ ಪ್ರತಿಸಾಂವತ್ಸರಿಕ ಶ್ರಾದ್ಧಂ ವಿಸ್ತರೇಣ ಕರ್ತುಮಶಕ್ತೋಹಂ ಅಸ್ಮತ್ ಪಿತೃಪಿತಾಮಹ–ಪ್ರಪಿತಾಮಹಾನಾಂ ಪ್ರೀತ್ಯರ್ಥಂ (ಅಸ್ಮನ್ಮಾತುಃ ಪ್ರತಿಸಾಂವತ್ಸರಿಕ ಶ್ರಾದ್ಧಂ ವಿಸ್ತರೇಣ ಕರ್ತುಮ ಶಕ್ತೋಹಂ ಅಸ್ಮನ್ಮಾತೃ – ಪಿತಾಮಹೀ – ಪ್ರಪಿತಾಮಹೀನಾಂ ಪ್ರೀತ್ಯರ್ಥಂ) ಶ್ರಾದ್ಧಸ್ಥಾನೇ ಶ್ರೀ ಮಹಾವಿಷ್ಣು ಸ್ವರೂಪಿಣೇ ಬ್ರಾಹ್ಮಣಾಯ ಆಮದ್ರವ್ಯ ದಾನಾಖ್ಯಂ ಕರ್ಮ ಕರಿಷ್ಯೇ ಇತಿ ಸಂಕಲ್ಪ್ಯ ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋ ಪಿವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ। ಇತ್ಯಾತ್ಮಾನಂ ಪ್ರೋಕ್ಷ್ಯ ಆಮದ್ರವ್ಯಂ ಸತಾಂಬೂಲಂ ಸಹಿರಣ್ಯಂ ಪಾತ್ರೇ ನಿಧಾಯ ಪ್ರೋಕ್ಷ್ಯ ಬ್ರಾಹ್ಮಣಾಯ ದತ್ವಾ ನಾಮಗೋತ್ರಕೀರ್ತನ ಪೂರ್ವಕಮಭಿವಾದಯೇತ್ । ಬ್ರಾಹ್ಮಣಸ್ತು ಆಶಿಷಂ ಪ್ರಯುಂಜೀತ । ಅನೇನ ಆಮದ್ರವ್ಯದಾನಾಖ್ಯ ಕರ್ಮಣಾ ಅಸ್ಮತ್‌ಪಿತೃ – ಪಿತಾಮಹ – ಪ್ರಪಿತಾಮಹಾಃ, – ಗೋತ್ರಾಃ -------- ಶರ್ಮಾಣಃ ಪ್ರೀಯತಾಂ ಇತಿ ಜಲಂ ವಿಸೃಜ್ಯ ಆಚಮ್ಯ ಪವಿತ್ರಂ ವಿಸೃಜೇತ್ । (ತಾಯಿಯ ಶ್ರಾದ್ಧದಲ್ಲಿ ಅಸ್ಮನ್ಮಾತುಃ ಇತ್ಯಾದಿ)

ಆಮದ್ರವ್ಯ = ಬೇಯಿಸದೆ ಇರುವ ಹಸಿಯ ವಸ್ತು, ಅಕ್ಕಿ, ಬೇಳೆ, ತರಕಾರಿ ಮೊದಲಾದ ಪರಿಕರ ದ್ರವ್ಯ.

**ಅನುಕಲ್ಪ - 5**

**ಸಂಕ್ಷಿಪ್ತ ಹಿರಣ್ಯ ಶ್ರಾದ್ಧ ವಿಧಿ**

ಆಮದ್ರವ್ಯಕ್ಕೆ ಬದಲಾಗಿ ತಾಂಬೂಲ ಸಹಿತವಾದ ದಕ್ಷಿಣೆಯನ್ನು ಸಾಧ್ಯವಾದರೆ ಹಣ್ಣು ತೆಂಗಿನಕಾಯಿಗಳನ್ನೂ ಇಡತಕ್ಕದ್ದು. ಆಮದ್ರವ್ಯ ಎಂಬುದಕ್ಕೆ ಬದಲಾಗಿ ಹಿರಣ್ಯ ಎಂದು ಹೇಳತಕ್ಕದ್ದು. ಉಳಿದ ವಿಧಾನವೆಲ್ಲವೂ ನಾಲ್ಕನೆಯ ಅನುಕಲ್ಪದಲ್ಲಿ ಹೇಳಿದಂತೆ.

**ಅನುಕಲ್ಪ - 6**

**ಗೋಗ್ರಾಸ ವಿಧಿ**

ಮೇಲೆ ಸಂಕ್ಷಿಪ್ತ ಆಮಶ್ರಾದ್ಧಕ್ಕೆ ಹೇಳಿದ ವಿಧಿಯೇ ಇದಕ್ಕೆ ಅನ್ವಯಿಸುತ್ತದೆ. ಶ್ರೀಮಹಾವಿಷ್ಣುಸ್ವರೂಪಿಣೇ ಬ್ರಾಹ್ಮಣಾಯ ಎಂಬುದಕ್ಕೆ ಬದಲಾಗಿ ಶ್ರೀ ಮಹಾವಿಷ್ಣು ಸ್ವರೂಪಿಣ್ಯೈಗವೇ ಎಂದು ಹೇಳತಕ್ಕದ್ದು. ಆಮದ್ರವ್ಯಕ್ಕೆ ಬದಲಾಗಿ ಗೋಗ್ರಾಸದಾನಾಖ್ಯಂ ಕರ್ಮಕರಿಷ್ಯೇ ಎಂದು ಸಂಕಲ್ಪ ಮಾಡುವುದು.

ಗೋಗ್ರಾಸ – ಅನ್ನ ಮುಂತಾದ ಭೋಜನದ್ರವ್ಯ ಅಥವಾ ತೊಳೆದ ಅಕ್ಕಿ, ಹಣ್ಣು ಬೆಲ್ಲ, ದಕ್ಷಿಣೆಯಿಲ್ಲ. ಗೋಗ್ರಾಸವನ್ನು ಗೋವಿಗೆ ಕೊಟ್ಟು ನಮಸ್ಕರಿಸುವುದು.

**ಅನುಕಲ್ಪ - 7**

**ರೋದನ ಶ್ರಾದ್ಧ**

ಮೇಲೆ ಹೇಳಿದ ಯಾವ ವಿಧಿಯನ್ನೂ ಆಚರಿಸಲು ಅಸಮರ್ಥನಾದವನು ರೋದನ ಶ್ರಾದ್ಧವನ್ನಾದರೂ ಮಾಡಬೇಕೆಂದು ವಿಧಿಸಿದ್ದಾರೆ. ಅಂಥವನು ಶ್ರಾದ್ಧದ ದಿನ ಅರಣ್ಯಕ್ಕೆ ಹೋಗಿ ಅಥವಾ ಯಾರೂ ಇಲ್ಲದ ಏಕಾಂತ ಸ್ಥಳದಲ್ಲಿ ಕುಳಿತು, ಭಕ್ತಿಯಿಂದ ತನ್ನ ಪಿತೃಗಳನ್ನು ಸ್ಮರಿಸಿಕೊಂಡು ಕಣ್ಣೀರು ಸುರಿಸಬೇಕು. ಕಡೆಯಲ್ಲಿ ಎರಡು ಕೈಗಳನ್ನೂ ಮೇಲೆತ್ತಿ ನಮಸ್ಕರಿಸುತ್ತಾ –

ನ ಮೇವಾಸ್ತಿ ವಿತ್ತಂ ನ ಧಾನ್ಯಂ ನ ಚಾನ್ನಂ

ಶ್ರಾದ್ಧೋಪಯೋಗಿ, ಸ್ವಪಿತೃನ್ ನತೋ ಸ್ಮಿ||

ತೃಪ್ಯಂತು ಭಕ್ತ್ಯಾ ಪಿತರೋ ಮಯ್ಯೈತೌ

ಭುಜೌ ಕೃತೌ ವರ್ತ್ಮನಿ ಮಾರುತಸ್ಯ ||

ಶ್ರಾದ್ಧರ್ಣಮೇತದ್ ಭವತಾಂ ಪ್ರದತ್ತಂ

ಮಹ್ಯಂ ದಯಧ್ವಂ ಪಿತೃದೇವತಾದ್ಯಾಃ ||

ಎಂದು ಗಟ್ಟಿಯಾಗಿ ಹೇಳಿ ಬರತಕ್ಕದ್ದು. ಆ ದಿನ ಹಗಲು ರಾತ್ರಿ ಸಂಪೂರ್ಣವಾಗಿ ಉಪವಾಸವಿರಬೇಕು.

**ಸೂಚನೆ:**

1. ಗೋಗ್ರಾಸ, ರೋದನ ಶ್ರಾದ್ಧಗಳಲ್ಲಿ ದಕ್ಷಿಣೆಯಿಲ್ಲ. ಉಳಿದವುಗಳಲ್ಲಿ ಯಾವ ಯಾವ ಪ್ರಕಾರವು ಸುಲಭವೋ ಅದರಲ್ಲಿ ಯಥೋಚಿತವಾಗಿ ದಕ್ಷಿಣೆಯನ್ನು ಹೆಚ್ಚಿಸಬೇಕು.

2. ಎಲ್ಲ ಅನುಕಲ್ಪ ವಿಧಿಗಳನ್ನೂ ಸ್ನಾನಮಾಡಿ ಶುಚಿ ವಸ್ತ್ರಗಳನ್ನು ಧರಿಸಿ ಮಾಡತಕ್ಕದ್ದು.

3. ಈ ಎಲ್ಲಾ ಅನುಕಲ್ಪಗಳೂ ಆಪತ್ಕಾಲದಲ್ಲಿ ಹೇಳಿದವು. ಅನುಕೂಲವಿದ್ದಾಗ ಎಷ್ಟು ಶಕ್ಯವೋ ಅಷ್ಟು ವಿಸ್ತಾರವಾಗಿಯೇ ಮಾಡಬೇಕು. ಆಲಸ್ಯ, ಉಪೇಕ್ಷೆಗಳಿಂದ ಸುಲಭ ಪ್ರಕಾರವನ್ನು ಅನುಸರಿಸಕೂಡದು. ರೋಧನ ಶ್ರಾದ್ಧದಲ್ಲಿ ಉಪವಾಸ. ಉಳಿದ ಎಲ್ಲ ಪ್ರಕಾರಗಳಲ್ಲಿ ಮಧ್ಯಾಹ್ನ ಒಂದು ಹೊತ್ತು ಮಾತ್ರ ಭೋಜನ.

4. ಗಯಾಶ್ರಾದ್ಧವನ್ನು ಮಾಡಿದವರು ಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕಾಗಿಲ್ಲವೆಂದು ಕೆಲವರು ಹೇಳುವುದುಂಟು. ಅದು ತಪ್ಪು ಕಲ್ಪನೆ. ಗಯಾ ಶ್ರಾದ್ಧವನ್ನು ಮಾಡಿದರೂ ಪ್ರತಿವರ್ಷದ ಶ್ರಾದ್ಧವನ್ನು ಮಾಡುತ್ತಲೇ ಇರಬೇಕು.

## ಮರಣ ಪ್ರಸಂಗಕ್ಕೆ ಸಂಬಂಧಿಸಿದಂತೆ ಕೆಲವು ಸೂಚನೆಗಳು

ಯಾವುದೆ ಒಂದು ಧಾರ್ಮಿಕ ಕಾರ್ಯವನ್ನು ನಡೆಸಬೇಕಾದರೂ ಪುರೋಹಿತರ ನೆರವು ಅವಶ್ಯ ಬೇಕಾಗುತ್ತದೆ. ಆದ್ದರಿಂದ ಪರಸ್ಥಳದಲ್ಲಿ, ವಿಶೇಷವಾಗಿ ನಗರದಲ್ಲಿ ವಾಸಮಾಡತಕ್ಕವರು ಸಮೀಪದಲ್ಲಿರುವ ಯೋಗ್ಯರಾದ ಪುರೋಹಿತರೊಬ್ಬರ ಪರಿಚಯವನ್ನು ಬೆಳೆಸಿಕೊಂಡು, ಅವರ ಹೆಸರು ವಿಳಾಸಗಳನ್ನು ಬರೆದು ಇಟ್ಟುಕೊಂಡಿರಬೇಕು. ಮನೆಯಲ್ಲಿ ಶುಭಕಾರ್ಯ ನಡೆಯುವಾಗ ಪುರೋಹಿತರ ಅನ್ವೇಷಣೆಗೆ ಸಮಯವಿರುತ್ತದೆ. ಆದರೆ ಮನೆಯಲ್ಲೊಂದು ಮರಣವೇ ಘಟಿಸಿದಾಗ ಕೂಡಲೇ ಅವರನ್ನು ಬರಮಾಡಿಕೊಳ್ಳುವುದು ಸುಲಭವಲ್ಲ. ಕುಟುಂಬದ ಸದಸ್ಯರೊಬ್ಬರಿಗೆ ಮುಪ್ಪು, ರೋಗ ಮುಂತಾದವುಗಳಿಂದ ಸಾವು ಸಮೀಪಿಸಿದೆಯೆಂದು ತಿಳಿದಾಗ, ಮನೆಯವರು ಈ ಕರ್ತವ್ಯಗಳನ್ನು ಪಾಲಿಸಬೇಕು.

1. ದೇವರ ಭಜನೆಯನ್ನು ನಡೆಸಬೇಕು. ವಿಷ್ಣುಸಹಸ್ರನಾಮವನ್ನೋ ಅಥವಾ ಭಗವದ್ಗೀತೆಯನ್ನೋ ಗಟ್ಟಿಯಾಗಿ ಪಠಿಸುತ್ತಿರಬೇಕು. ಕಡೆಯ ನಿಮಿಷ ಬಂದಾಗ, ಸಾಯುವ ವ್ಯಕ್ತಿಯ ಕಿವಿಯಲ್ಲಿ ರಾಮ, ರಾಮ ಎಂದು ರಾಮನಾಮವನ್ನು ಹೇಳಬೇಕು. ಶ್ರೀರಾಮ ನಾಮಕ್ಕೆ ತಾರಕ ಮಂತ್ರವೆಂದು ಹೆಸರಿದೆ. ಮೃತರಿಗೆ ಸದ್ಗತಿಯನ್ನು ಕೊಡತಕ್ಕ ಶ್ರೇಷ್ಠವಾದ ನಾಮವಿದು. ಅಥವಾ ಯಾವುದಾದರೂ ಇಷ್ಟದೇವತೆಯ ನಾಮವನ್ನಾದರೂ ಉಚ್ಚರಿಸುತ್ತಿರಬಹುದು. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ.

   ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ ।

   ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥

   ಗೀತಾ 8–9

   ಮರಣ ಕಾಲ ಬಂದಾಗ ಯಾವಾತನು ಪರಮೇಶ್ವರನಾದ ನನ್ನನ್ನೇ ಸ್ಮರಿಸುತ್ತ ದೇಹವನ್ನು ಬಿಡುವನೋ ಅವನು ನನ್ನ ಸ್ವರೂಪವನ್ನು – ಮೋಕ್ಷವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

2. ನೆಲದ ಮೇಲೆ ರಂಗವಲ್ಲಿಯನ್ನು ಹಾಕಿ ದರ್ಭೆಗಳನ್ನು ದಕ್ಷಿಣಾಭಿಮುಖವಾಗಿ ಹರಡಿ, ಸಾಯುತ್ತಿರುವ ವ್ಯಕ್ತಿಯನ್ನು ಅದರ ಮೇಲೆ ಎತ್ತಿ ಮಲಗಿಸಬೇಕು. ಇದಕ್ಕೆ ಭೂಶಯನ ಎನ್ನುತ್ತಾರೆ. ಮಂಚದ ಮೇಲೆ, ಹಾಸಿಗೆಯಲ್ಲಿ ಪ್ರಾಣ ಬಿಡುವುದು ಒಳ್ಳೆಯದಲ್ಲ. ಭೂಶಯನದಲ್ಲಿ ಪ್ರಾಣ ಹೋದ ಮೇಲೆ ಬೇರೊಂದು ಚಾಪೆಯಲ್ಲಿ ಮಲಗಿಸಬಹುದು.

3. ಪ್ರಾಣ ಹೋದೊಡನೆ ಶವದ ಕಣ್ಣು ರೆಪ್ಪೆಗಳನ್ನು ಮುಚ್ಚಬೇಕು. ಕುತ್ತಿಗೆಯವರೆಗೆ ಬಟ್ಟೆಯನ್ನು ಹೊದಿಸಬೇಕು. ಶವದ ಮೂಗಿನ ಹೊಳ್ಳೆಗಳಿಂದ ಒಂದು ಬಗೆಯ ದ್ರವ ಹೊರಡಲಾರಂಭಿಸುತ್ತದೆ. ಆದ್ದರಿಂದ ಮೂಗಿಗೆ ಮೃದುವಾದ ಹತ್ತಿಯನ್ನು ತುರುಕಬೇಕು.

4. ಶವದ ಹಣೆಗೆ ತ್ರಿಪುಂಡ್ರವನ್ನು ಬಳಿಯತಕ್ಕದ್ದು. ಮೃತಳಾದ ಸ್ತ್ರೀ ಮುತ್ತೈದೆ ಅಥವಾ ಕನ್ಯೆಯಾಗಿದ್ದಲ್ಲಿ ಅರಿಶಿಣ – ಕುಂಕುಮಗಳನ್ನು ಹಚ್ಚಬೇಕು.

5. ಶವದ ತಲೆ ದಕ್ಷಿಣದ ಕಡೆಗೆ ಬರುವಂತೆ ಮಲಗಿಸಬೇಕು. ಶವದ ದೃಷ್ಟಿ ಮನೆಗೆ ಅಭಿಮುಖವಾಗಿ ಒಳಗೆ ಹೋಗುವಂತೆ ಇರಬಾರದು.

6. ಅನಂತರ ಪುರೋಹಿತರಿಗೆ ಹೇಳಿ ಕಳಿಸಿ ಅವರು ಹೇಳಿದಂತೆ ಮುಂದಿನ ವ್ಯವಸ್ಥೆಯನ್ನು ಮಾಡತಕ್ಕದ್ದು.

7. ಶವವು ಮನೆಯಲ್ಲಿರುವಾಗ ಯಾರೂ ಆಹಾರವನ್ನು ಸೇವಿಸಕೂಡದು. ಒಂದು ರಾತ್ರಿಗಿಂತ ಅಧಿಕವಾಗಿ ಶವವನ್ನು ಇಟ್ಟುಕೊಳ್ಳಬಾರದು. ಆದಷ್ಟು ಬೇಗ ದಹನ ಕ್ರಿಯೆಯನ್ನು ನಡೆಸಬೇಕು.

8. ಶವವಿರುವವರೆಗೆ ಮನೆಯ ಎದುರಿನಲ್ಲಿ ಬೆರಣಿಗಳಿಂದ ಬೆಂಕಿಯನ್ನು ಉರಿಸುವ ಪದ್ಧತಿ ಇದೆ.

9. ದಹನಕ್ಕೆ ಪೂರ್ವದಲ್ಲಿ ಪುರೋಹಿತರು ಸಿಗದೆ ಅನಿವಾರ್ಯ ಪ್ರಸಂಗ ಒದಗಿದಲ್ಲಿ ಅಮಂತ್ರಕವಾಗಿಯೇ ದಹನವನ್ನು ಮಾಡಿ, ಅನಂತರ ಅಸ್ಥಿಗಳನ್ನು ತಂದು ಇಟ್ಟುಕೊಳ್ಳತಕ್ಕದ್ದು. ಆಮೇಲೆ ಪುರೋಹಿತರ ಹೇಳಿಕೆಯಂತೆ ನಡೆದುಕೊಳ್ಳತಕ್ಕದ್ದು.

# ಅಶೌಚ ಪ್ರಕರಣ

ಬಂಧು ವರ್ಗದಲ್ಲಿ ಜನನ–ಮರಣಗಳು ಸಂಭವಿಸಿದಾಗ ಸಂಬಂಧಿಗಳಿಗೆ ಅಶುಚಿತ್ವವು ಬರುತ್ತದೆಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ಇದನ್ನು ಅಶೌಚ ಎನ್ನುತ್ತಾರೆ. ಅಶೌಚವು ಜಾತಾಶೌಚ (ಜನನಾಶೌಚ) ಮೃತಾಶೌಚ (ಮರಣಾಶೌಚ) ಎಂದು ಎರಡು ವಿಧ. ಜಾತಾಶೌಚವನ್ನು ಆಮೆ ಎಂದೂ ಪುರುಡು ಎಂದೂ, ಮೃತಾಶೌಚವನ್ನು ಸೂತಕವೆಂದೂ ಹೇಳುವುದುಂಟು. ಇದು ಲೋಕರೂಢಿಗೆ ಸಂಬಂಧಿಸಿದ ಮಾತು. ಜಾತಾಶೌಚಕ್ಕಿಂತ ಮೃತಾಶೌಚವು ಪ್ರಬಲವೆಂದೂ ಮೃತಾಶೌಚ ಬಂದವರನ್ನು ಮುಟ್ಟಿದರೆ ಸ್ನಾನ ಮಾಡಬೇಕೆಂದೂ ವಿಧಿ ಇದೆ. ಉಭಯ ಅಶೌಚಗಳಲ್ಲಿಯೂ ದೇವ ಪೂಜೆ ಮುಂತಾದ ಕಾರ್ಯಗಳು ನಿಷಿದ್ಧ. ಸಂಧ್ಯಾವಂದನೆಯನ್ನು ಮಾತ್ರ ಮೌನವಾಗಿ ಆಚರಿಸತಕ್ಕದ್ದು. ತಂದೆತಾಯಿಗಳ ಮರಣವಾದಾಗ ಮಕ್ಕಳಿಗೂ ಉಳಿದ ಸಂದರ್ಭಗಳಲ್ಲಿ ಅವರ ಕ್ರಿಯೆಯನ್ನು ಮಾಡತಕ್ಕವರಿಗೂ ಸಹ ಸಂಧ್ಯಾವಂದನೆಯೂ ಇಲ್ಲ. ಅಶೌಚದ ಅವಧಿಯು ಕಳೆದ ಮೇಲೆ ಸ್ನಾನ, ಪಂಚಗವ್ಯ ಪ್ರಾಶನ, ನೂತನ ಯಜ್ಞೋಪವೀತ ಧಾರಣೆಗಳಿಂದ ಶುದ್ಧಿಯಾಗುತ್ತದೆ.

ಈ ಶಬ್ದಗಳ ಅರ್ಥವನ್ನು ತಿಳಿದುಕೊಳ್ಳಬೇಕು.

1. ಸಪಿಂಡರು – ಮೂಲ ಪುರುಷನಿಂದ ಏಳನೆಯ ತಲೆಯವರೆಗಿನವರು. ಎಂದರೆ ಏಳನೆಯ ತಲೆಯವರನ್ನೂ ಸೇರಿಸಿಕೊಂಡು ಅಲ್ಲಿಯವರೆಗಿನ ಪರಸ್ಪರ ಸಪಿಂಡರೆನಿಸುತ್ತಾರೆ. ಇವರು 10 ದಿನಗಳ ಅಶೌಚಕ್ಕೆ ಭಾಗಿಗಳು.

2. ಸೋದಕರು – ಮೂಲ ಪುರುಷನ ಎಂಟನೆಯ ತಲೆಯಿಂದ ಹದಿನಾಲ್ಕನೆಯ ತಲೆಯ ವರೆಗಿನವರು ಪರಸ್ಪರ ಸೋದಕರು. ಇವರು 3 ದಿನಗಳ ಅಶೌಚಕ್ಕೆ ಭಾಗಿಗಳು.

3. ಸಗೋತ್ರರು – ಮೂಲ ಪುರುಷನ ಹದಿನೈದನೆಯ ತಲೆಯಿಂದ ಇಪ್ಪತ್ತೊಂದನೆಯ ತಲೆಯವರೆಗಿನವರು ಪರಸ್ಪರ ಸಗೋತ್ರರು. ಇವರಿಗೆ 1 ದಿನ ಅಶೌಚ.

4. ಜ್ಞಾತಿಗಳು – ಮೇಲೆ ಹೇಳಿದ ಮೂರು ವರ್ಗದವರು (ದಾಯಾದರು, ಬಾಂಧವರು)

21ನೆಯ ತಲೆಯನ್ನು ಬಿಟ್ಟು ಅದಕ್ಕಿಂತ ಮುಂದಿನವರು ಏಕ ಗೋತ್ರದವರು. ಇವರನ್ನು ಸಗೋತ್ರರೆಂದೂ ಹೇಳುವುದುಂಟು. ಇವರಿಗೆ ಏಕ ಗೋತ್ರ ಸಂಬಂಧದ ಅಶೌಚವಿಲ್ಲ. ಸಾಮಾನ್ಯವಾಗಿ ರಾತ್ರಿ 1 ಗಂಟೆಯೊಳಗೆ ಅಶೌಚ ನಿಮಿತ್ತವು ಸಂಭವಿಸಿದರೆ ಹಿಂದಿನ ದಿನಕ್ಕೂ ಅನಂತರ ಸಂಭವಿಸಿದರೆ ಮುಂದಿನ ದಿನಕ್ಕೂ ಅನ್ವಯಿಸುತ್ತದೆಯೆಂದೂ ತಿಳಿಯಬೇಕು.

5. ಪಕ್ಷಿಣೀ – ಒಂದೂವರೆ ದಿನ. ಅಶೌಚ ನಿಮಿತ್ತವು ಹಗಲಿನಲ್ಲಾದರೆ ಮಾರನೆಯ ದಿನ ಸೂರ್ಯಾಸ್ತಪರ್ಯಂತ, ರಾತ್ರಿಯಲ್ಲಾದರೆ ಮರುದಿನದ ರಾತ್ರಿ ಕಳೆದ ಮಾಲೆ ಸೂರ್ಯೋದಯಪರ್ಯಂತ.

6. ಸಜ್ಯೋತಿ – ಹಗಲಲ್ಲಾದರೆ ಸೂರ್ಯಾಸ್ತಪರ್ಯಂತ, ರಾತ್ರಿಯಲ್ಲಾದರೆ ಸೂರ್ಯೋದಯ ಪರ್ಯಂತ. ಈ ಕಾಲಕ್ಕೆ ಸಜ್ಯೋತಿಯೆಂದು ಹೆಸರು.

ಸೂಚನೆ – ಈಗ ಬಹು ಜನರಲ್ಲಿ ಆಚರಣೆಯಲ್ಲಿರುವ ಅಶೌಚದ ಸ್ಥೂಲ ರೂಪವನ್ನು ಮಾತ್ರ ಮುಂದಿನ ಅಶೌಚ ಪಟ್ಟಿಕೆಯಲ್ಲಿ ತಿಳಿಸಿದೆ. ಹೆಚ್ಚಿನ ವಿವರವು ಬೇಕಾದಲ್ಲಿ ಶಾಸ್ತ್ರಜ್ಞರಿಂದ ತಿಳಿದುಕೊಳ್ಳಬೇಕು.

## ಅಶೌಚ ಪಟ್ಟಿಕಾ

### 1. ಜಾತಾಶೌಚ

| ಅಶೌಚಕ್ಕೆ ಕಾರಣ | ಯಾರಿಗೆ ಅಶೌಚ | ಎಷ್ಟು ದಿನ ಇತ್ಯಾದಿ |
|---|---|---|
| ಗರ್ಭಸ್ರಾವ (3 ತಿಂಗಳವರೆಗೆ) | ತಾಯಿಗೆ | 3 ದಿನ |
| | ತಂದೆ ಮೊದಲಾದ ಸಪಿಂಡರಿಗೆ | ಸ್ನಾನ |
| ಗರ್ಭಸ್ರಾವ (4 ರಿಂದ 6 ತಿಂಗಳವರೆಗೆ) | ತಾಯಿಗೆ | 6 ದಿನ |
| | ತಂದೆ ಮೊದಲಾದ ಸಪಿಂಡರಿಗೆ | 3 ದಿನ |
| | ಸೋದಕರಿಗೆ | ಸ್ನಾನ |

| | | |
|---|---|---|
| 7 ತಿಂಗಳು ಕಳೆದ ಮೇಲೆ | ತಾಯಿಗೆ ಮತ್ತು ಸಪಿಂಡರಿಗೆ | 10 ದಿನ |
| ಗರ್ಭದ ಅಥವಾ ಮೃತ ಶಿಶುವಿನ ಜನನ | ಸೋದಕರಿಗೆ | 3 ದಿನ |
| ತಾಯಿಯ ಮನೆಯಲ್ಲಿ ಮಗಳಿಗೆ ಪ್ರಸವ | ತಾಯಿ, ತಂದೆ ಸೋದರರಿಗೆ | 3 ದಿನ |

(ಜಾತಾಶೌಚದಲ್ಲಿ ತಾಯಿ ಮತ್ತು ಶಿಶುಗಳಿಗೆ ಆಸ್ಪೃಶ್ಯತೆ ಉಂಟು)

## 2. ಮೃತಾಶೌಚ

| ಯಾರ ಮರಣ | ಯಾರಿಗೆ ಅಶೌಚ | ಎಷ್ಟು ದಿನ ಇತ್ಯಾದಿ |
|---|---|---|
| 10 ದಿನದೊಳಗಿನ ಶಿಶು | ತಂದೆ ತಾಯಿಗಳಿಗೆ | 10 ದಿನ |
| | ಉಳಿದ ಸಪಿಂಡರಿಗೆ ಜನನಾಶೌಚದ ಜೊತೆಗೆ ನಿವೃತ್ತಿ | |
| 10 ದಿನ ಕಳೆದ ಮೇಲೆ 3 ವರ್ಷ | ತಂದೆ ತಾಯಿಗಳಿಗೆ | 10 ದಿನ |
| ದೊಳಗಿನ ಶಿಶುಸ | ಪಿಂಡರಿಗೆ | 1 ದಿನ |
| 3 ವರ್ಷವಾದ ಮೇಲೆ | ತಂದೆ ತಾಯಿಗಳಿಗೆ | 10 ದಿನ |
| ಅಥವಾ ಚೌಳವಾಗಿದ್ದು ಉಪನಯನವಾಗದಿರುವ | ಸಪಿಂಡರಿಗೆ | 3 ದಿನ |
| ಮಗು | ಸೋದಕರಿಗೆ | ಸ್ನಾನ |
| ಉಪನಯನವಾದವನು | ಸರ್ವಪಿಂಡರಿಗೆ | 10 ದಿನ |
| ಗೃಹಸ್ಥನೂ ಸಹ | ಸೋದಕರಿಗೆ3 ದಿನ | |
| | ಸಗೋತ್ರರಿಗೆ | ಪಕ್ಷಿಣೀ (1½ ದಿನ) |

| | | |
|---|---|---|
| 3 ವರ್ಷಕ್ಕೆ ಮೇಲ್ಪಟ್ಟು | ತಾಯಿ, ತಂದೆಗಳಿಗೆ | 10 ದಿನ |
| ಅವಿವಾಹಿತ ಕನ್ಯೆ | ಸಪಿಂಡರಿಗೆ | ಪಕ್ಷಿಣೀ (1½ ದಿನ) |
| | ಸೋದಕರಿಗೆ | ಸ್ನಾನ |
| ವಿವಾಹಿತ ಸ್ತ್ರೀ | ತಾಯಿ, ತಂದೆ, ಸೋದರರಿಗೆ | 3 ದಿನ |
| | ತಂದೆಯ ಸಪಿಂಡರಿಗೆ | ಸ್ನಾನ |
| | ಪತಿಯ ಸಪಿಂಡರಿಗೆ | ಸ್ನಾನ |
| | ಪತಿಯ ಸೋದಕರಿಗೆ | 3 ದಿನ |
| | ಪತಿಯ ಸಗೋತ್ರರಿಗೆ | ಪಕ್ಷಿಣೀ (1½ ದಿನ) |

(ವಿವಾಹಿತ ಸ್ತ್ರೀಗೆ ಗೋತ್ರ, ಸಾಪಿಂಡ್ಯ ವೊದಲಾದದ್ದು ಅವಳ ಪತಿಗೆ ಇರುವಂತೆಯೇ ಅನ್ವಯಿಸುತ್ತದೆ)

| | | |
|---|---|---|
| ತಾಯಿ, ತಂದೆಯರು | ಪುತ್ರರಿಗೆ ಮತ್ತು ಅವಿವಾಹಿತ ಪುತ್ರಿಯರಿಗೆ | 10 ದಿನ |
| ತಾಯಿ, ತಂದೆಯರು ಮತ್ತು ಸೋದರ | ವಿವಾಹಿತ ಸ್ತ್ರೀಗೆ | 3 ದಿನ |
| ಸೋದರನ ಮಗ ಸೋದರನ ಮಾವ ಸೋದರ ಮಾವನ ಪತ್ನಿ ಮತ್ತು ಸೋದರಿ | | ಪಕ್ಷಿಣೀ |
| ತಂದೆಯ ಸೋದರ ಮತ್ತು ಅವನ ಪತ್ನಿ, ಪಿತಾಮಹ | | ಸ್ನಾನ |

| | | |
|---|---|---|
| ಮಾತಾಮಹ, ಮಾತಾಮಹಿ | | |
| ಸೋದರ ಮಾವ | ಪುರುಷನಿಗೆ | 3 ದಿನ |
| ಸೋದರ ಮಾವನ ಪತ್ನಿ | | |
| ಸೋದರ ಅಳಿಯ | ಸೋದರ ಮಾವನಿಗೆ | 3 ದಿನ |
| ಸೋದರ ಸೊಸೆ | | ಸ್ನಾನ |
| ಮಗಳ ಮಗ | ತನಗೆ | 3 ದಿನ |
| ಮಾತಾಮಹ, ಮಾತಾಮಹಿ | ಮಗಳ ಮಗನಿಗೆ | 3 ದಿನ |
| ಅತ್ತೆಮಾವಂದಿರು | ಅಳಿಯನಿಗೆ | 3 ದಿನ |
| ಅಳಿಯ | ಅತ್ತೆಮಾವಂದಿರಿಗೆ | 3 ದಿನ |
| ಶ್ಯಾಲಕ (ಪತ್ನಿಯ ಸೋದರ) | ತನಗೆ | ಸಜ್ಯೋತಿ |
| ಶ್ಯಾಲಕನ ಪುತ್ರ | ತನಗೆ | ಸ್ನಾನ |
| ತಾಯಿಯ ಸೋದರ ಮತ್ತು ತಂದೆಯ ಸೋದರಿ | ಪುರುಷನಿಗೆ | 3 ದಿನ |
| ಸೋದರಿಯ ಪತಿ (ಭಾವ) | ತನಗೆ (ಸಜ್ಯೋತಿ ಎಂದು ತೋರುತ್ತದೆ. ವಚನ ದೊರೆಯಲಿಲ್ಲ) | |

ಆತ್ಮಬಾಂಧವರು – ತನ್ನ ತಂದೆಯ ಸೋದರಿಯ ಪುತ್ರ, ತಾಯಿಯ ಸೋದರಿಯ ಪುತ್ರ ಮತ್ತುಸೋದರ ಮಾವನ ಪುತ್ರರು.

ಪಿತೃ ಬಾಂಧವರು – ಇದೇ ರೀತಿ ತಂದೆಯ ಆತ್ಮಬಾಂಧವರು

ಮಾತೃ ಬಾಂಧವರು – ಇದೇ ರೀತಿ ತಾಯಿಯ ಆತ್ಮಬಾಂಧವರು

ಈ ಮೂರು ಬಾಂಧವರ ಮರಣದಲ್ಲಿ – ತನಗೆ – ಪಕ್ಷಿಣೀ

| | | |
|---|---|---|
| ದತ್ತಕರನ ಮರಣ | ದತ್ತುತೆಗೆದುಕೊಂಡ ತಾಯಿ, ತಂದೆಯರಿಗೆ | 10 ದಿನ |
| | ದತ್ತುತಂದೆಯ ಸಪಿಂಡರಿಗೆ | 3 ದಿನ |
| | ಆತನ ಸೋದಕರಿಗೆ | ಸ್ನಾನ |
| | ಹಡೆದ ತಂದೆ, ತಾಯಿಯರಿಗೆ | 3 ದಿನ |
| | ಅವರ ಸಪಿಂಡರಿಗೆ | ಸ್ನಾನ |

ಸೂಚನೆಃ–1 ಬಾಂಧವ್ಯವು ದೂರವಾದಂತೆ ಅಶೌಚವು ಕಡಿಮೆಯಾಗುತ್ತದೆ. ಅದನ್ನು ಅಲ್ಲಲ್ಲಿ ಊಹಿಸಿಕೊಳ್ಳಬೇಕು. ದೂರದ ಬಂಧುಗಳು ತನ್ನ ಗೃಹದಲ್ಲಿಮರಣ ಹೊಂದಿದಾಗ ತನಗೆ ಅಶೌಚವು ಒಂದು ಮೆಟ್ಟಿಲು ಅಧಿಕವಾಗುತ್ತದೆ. ಪರಕೀಯನು ತನ್ನ ಮನೆಯಲ್ಲಿ ಮೃತನಾದಾಗ 1 ದಿನ ಅಶೌಚ.

1. ಯತಿಯ ಮರಣದಲ್ಲಿ ಸರ್ವಸಪಿಂಡರಿಗೂ ಸ್ನಾನ ಮಾತ್ರ.
2. ಗೃಹದಲ್ಲಿ ನಾಯಿ ಸತ್ತರೆ 10 ದಿನ ಅಶೌಚ.
3. ಹಸು – ಮೊದಲಾದ ಇತರ ಪಶುಗಳು ಸತ್ತರೆ ಶವವನ್ನು ಹೊರಗೆ ಸಾಗಿಸುವ ಪರ್ಯಂತ ಅಶೌಚ.

# ಕಠಿಣ ಶಬ್ದಗಳ ಅರ್ಥ

ಅಪ ಉಪಸ್ಪೃಶ್ಯ – ಕೈ ತೊಳೆದುಕೊಂಡು, ನೀರನ್ನು ಬೆರಳಿನಿಂದ ಮುಟ್ಟಿ

ಅಭಿಘಾರ್ಯ – ತುಪ್ಪವನ್ನು ಮೇಲೆ ಹಾಕಿ

ಅಭಿವಾದನ – ತನ್ನ ನಾಮ ಗೋತ್ರಾದಿಗಳನ್ನು ಹೇಳುತ್ತ ಗುರುಹಿರಿಯರ ಪಾದಾಂಗುಷ್ಠಗಳನ್ನು ಮುಟ್ಟಿ ನಮಸ್ಕರಿಸುವುದು. ಆಶೀರ್ವಾದವನ್ನು ಹೇಳಿಸುವುದು – ಎಂದು ಶಬ್ದಾರ್ಥ

ಅನಾಮಿಕಾ – ಹೆಬ್ಬೆರಳಿನಿಂದ ನಾಲ್ಕನೆಯ ಬೆರಳು. ಉಂಗುರ ಹಾಕಿಕೊಳ್ಳುವ ಬೆರಳು

ಅಂಗುಷ್ಠ – ಕೈ ಹೆಬ್ಬೆರಳು

ಅಂಜಲಿ – ಎರಡು ಕೈಗಳನ್ನು ಸೇರಿಸಿದ ಬೊಗಸೆ

ಆಚಮ್ಯ – ಆಚಮನ ಮಾಡಿ, ಓಂ ಋಗ್ವೇದಾಯ ಸ್ವಾಹಾ – ಇತ್ಯಾದಿಯಾಗಿ ಮೂರು ಸಲ ಬಲಗೈಯಿಂದ ಜಲ ಪ್ರಾಶನ ಮಾಡುವುದು ಒಂದು ಆಚಮನ

ಆಜ್ಯಾಕ್ತಾಃ ಸಮಿಧಃ – ತುಪ್ಪವನ್ನು ಸವರಿದ ಸಮಿತ್ತುಗಳು

ಆಮದ್ರವ್ಯ – ಬೇಯಿಸದೆ ಇರುವ ಹಸಿಯ ಪದಾರ್ಥ

ಉಪತಿಷ್ಠತೇ – ಸ್ತುತಿಸುತ್ತಾನೆ, ಸ್ತುತಿಸಬೇಕು

ಉಪಸ್ಥಾನ – ನಮಸ್ಕಾರ ಪೂರ್ವಕವಾದ ಸ್ತುತಿ

ಉದ್ವರ್ತ್ಯ – ಬಟ್ಟೆಯಿಂದ ಒರೆಸಿ

ಉಪವೀತಿ – ಎಡ ಹೆಗಲ ಮೇಲೆ ಮತ್ತು ಬಲದೋಳಿನ ಕೆಳಗೆ ಬರುವಂತೆ ಜನಿವಾರವನ್ನು ಧರಿಸಿದವರು

ಋಷಿತೀರ್ಥ – (ಈ ಪ್ರಕರಣದ ಕಡೆಯಲ್ಲಿ ನೋಡಿ)

ಕಟಿಂಬದ್ಧ್ವಾ – ಹೊದೆಯುವ ಬಟ್ಟೆಯಿಂದ ಸೊಂಟವನ್ನು ಕಟ್ಟಿ

ಕಟಿಂ ವಿಸ್ರಸ್ಯ – ಸೊಂಟಕ್ಕೆ ಕಟ್ಟಿದ ಬಟ್ಟೆಯನ್ನು ಸಡಿಲಿಸಿ ತೆಗೆದು

ಕನಿಷ್ಠಿಕಾ – ಕಿರುಬೆರಳು

ಕವ್ಯ – ಪಿತೃ ದೇವತೆಗಳಿಗೆ ಅರ್ಪಿಸುವ ವಸ್ತು

ಕುಶ – ದರ್ಭೆ

ಕುಶೋದಕ – ದರ್ಭೆಗಳಿಂದ ಸಹಿತವಾದ ನೀರು

ಕೂರ್ಚ – ವಿಹಿತ ಕ್ರಮದಲ್ಲಿ ಕಟ್ಟಿದ ದರ್ಭೆಗಳು

ಚತುರಸ್ರ ಮಂಡಲ – ನೀರಿನಿಂದ ಗುರುತಿಸಿದ ಚೌಕವಾದ ಮಂಡಲ

ತರ್ಜನೀ – ಹೆಬ್ಬೆರಳಿನಿಂದ ಎರಡನೆಯ ಬೆರಳು

ತೀರ್ಥ – ದೇವರಿಗೆ ಅಭಿಷೇಕ ಮಾಡಿಸಿದ ಜಲ (ಇದಕ್ಕೆ ಶಂಖಜಲ ಮತ್ತು ತುಳಸೀದಳ ಸೇರಬೇಕು)

ತ್ರಿಃ – ಮೂರು ಸಲ

ದರ್ವೀ – ಅನ್ನವನ್ನು ಬಡಿಸುವ ಸಟ್ಟುಗ

ದೇವತೀರ್ಥ – (ಈ ಪ್ರಕರಣದ ಕಡೆಯಲ್ಲಿ ನೋಡಿ)

ದ್ವಿಃ – ಎರಡು ಸಲ

ಧೃತ್ವಾ – ಧರಿಸಿ

ನಿಖನೇತ್ – ನೆಲದಲ್ಲಿ ಹೂಳಬೇಕು

ನಿನೀಯ – ಸೇರಿಸಿ, ಇನ್ನೊಂದು ಪಾತ್ರೆಗೆ ಜಲವನ್ನು ಕೂಡಿಸಿ

ನಿವೀತಿ – ಮಾಲಾಕಾರವಾಗಿ ಜನಿವಾರವನ್ನು ಧರಿಸಿದವನು

ನೀರಾಜನ – ಮಂಗಳಾರತಿ

ಪಂಚಗವ್ಯ – ಹಸುವಿನ ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ

ಪಂಚಾಮೃತ – ಹಸುವಿನ ಹಾಲು, ಮೊಸರು, ತುಪ್ಪ, ಸಕ್ಕರೆ ಜೇನುತುಪ್ಪ

ಪರಿವಿಷ್ಟ – ಎಲೆಗೆ ಬಡಿಸಿದ ವಸ್ತು

ಪರಿವೇಕ್ಷ್ಯಮಾಣ – ಮುಂದೆ ಬಡಿಸತಕ್ಕದ್ದು

ಪರಿವೇಷಯೇತ್ – ಬಡಿಸಬೇಕು

ಪವಿತ್ರ – ಪವಿತ್ರಾಕೃತಿಯಲ್ಲಿ ಕಟ್ಟಿದ ದರ್ಭೆಗಳು

ಪಿತೃ ತೀರ್ಥ – (ಈ ಪ್ರಕರಣದ ಕಡೆಯಲ್ಲಿ ನೋಡಿ)

ಪಿತಾಮಹ – ತಂದೆಯ ತಂದೆ

ಪಿತಾಮಹೀ – ತಂದೆಯ ತಾಯಿ

ಪ್ರಪಿತಾಮಹ – ತಂದೆಯ ಅಜ್ಜ

ಪ್ರಪಿತಾಮಹೀ – ತಂದೆಯ ಅಜ್ಜಿ

ಪ್ರಾಣಾನಾಯಮ್ಯ – ಪ್ರಾಣಾಯಾಮವನ್ನು ಮಾಡಿ

ಪ್ರಾಚೀನಾವೀತಿ – ಬಲ ಹೆಗಲ ಮೇಲೆ, ಎಡದೋಳಿನ ಕೆಳಗೆ ಬರುವಂತೆ ಜನಿವಾರವನ್ನು ಧರಿಸಿದವನು

ಪ್ರೋಕ್ಷ್ಯ– ಪ್ರೋಕ್ಷಣೆ ಮಾಡಿ, ಚಿಮುಕಿಸಿ

ಮಧ್ಯಮಾ – ನಡುಬೆರಳು

ಮಾತಾಮಹ – ತಾಯಿಯ ತಂದೆ

ಮಾತಾಮಹೀ – ತಾಯಿಯ ತಾಯಿ

ಮಾತುಃಪಿತಾಮಹ – ತಾಯಿಯ ಅಜ್ಜ

ಮಾತುಃಪಿತಾಮಹೀ – ತಾಯಿಯ ಅಜ್ಜಿ

ಮಾರ್ಜಯಿತ್ವಾ – ಮಾರ್ಜನೆ ಮಾಡಿ, ಪ್ರೋಕ್ಷ್ಯ

ವರ್ತುಲಂ ಮಂಡಲಂ – ದುಂಡಾಕಾರವಾದ ಮಂಡಲ

ಸಪರಿಕರಂ – ತೊವ್ವೆ ಮುಂತಾದ ವ್ಯಂಜನ ದ್ರವ್ಯಗಳಿಂದ ಕೂಡಿದ್ದು

ಸಂಭಾರಾನ್ ಸಂಭೃತ್ಯ – ಸಾಮಗ್ರಿಗಳನ್ನು ತಂದಿಟ್ಟುಕೊಂಡು

ಸಂಮಾರ್ಜ್ಯ – ಮಾರ್ಜನೆ ಮಾಡಿ, ಪ್ರೋಕ್ಷ್ಯ

ಸಂಯೋಜನಸ್ಥಾಲೀ – ಪಂಚಗವ್ಯವನ್ನು ಸೇರಿಸಬೇಕಾದ ಇನ್ನೊಂದು ಲೋಟ

ಸಿಕತಾ – ಮರಳು, ರಂಗೋಲಿ ಪುಡಿ

ಸ್ಪರ್ಶಯಿತ್ವಾ – ಮುಟ್ಟಿಸಿ

ಹಿರಣ್ಯ – ಚಿನ್ನ, ಹಣ

1.

ಚತುರ್ಭಿಃ ಪೌಷ್ಟಿಕೇ ಯಜ್ಞೇ ಪಂಚಭಿಸ್ತ್ವಾಭಿಚಾರಿಕೇ ।

ಪಿತ್ರ್ಯೇ ತ್ರಿಭಿಃ ಪವಿತ್ರಾರ್ಥಂ ದ್ವಾಭ್ಯಾಂ ದರ್ಭೌನಿತ್ಯಕರ್ಮಣಿ ॥

ವೆಂಕಟೇಶೀಯ ಪ್ರಯೋಗ–

ಶ್ರೇಯಸ್ಕರವಾದ ಯಜ್ಞಾದಿ ವಿಧಿಗಳಲ್ಲಿ ಪವಿತ್ರವು ನಾಲ್ಕು ದರ್ಭೆಗಳಿಂದಲೂ, ಅಭಿಚಾರಿಕದಲ್ಲಿ (ಮಾಟ – ಮೊದಲಾದದ್ದು) ಐದು ದರ್ಭೆಗಳಿಂದಲೂ, ಪಿತೃ ಕಾರ್ಯದಲ್ಲಿ ಮೂರು ದರ್ಭೆಗಳಿಂದಲೂ, ನಿತ್ಯ ಕರ್ಮದಲ್ಲಿ ಎರಡು ದರ್ಭೆಗಳಿಂದಲೂ ಕೂಡಿರಬೇಕು (ಪವಿತ್ರ ಕಟ್ಟುವ ಕ್ರಮವನ್ನು ಬಲ್ಲವರಿಂದ ತಿಳಿದುಕೊಳ್ಳಬೇಕು)

2.

ಅಂಗುಷ್ಠಮೂಲಸ್ಯ ತಲೇ ಬ್ರಾಹ್ಮಂತೀರ್ಥಂ ಪ್ರಚಕ್ಷತೇ ।

ಕಾಯಮಂಗುಲಿಮೂಲೇಗ್ರೇ ದೈವಂಪಿತ್ರ್ಯಂ ತಯೋರಧಃ ॥ (ಮನುಸ್ಮೃತಿ)

ಕನಿಷ್ಠ ದೇಶಿನ್ಯಂಗುಷ್ಠಮೂಲಾನ್ಯಗ್ರಂ ಕರಸ್ಯ ಚ ।

ಪ್ರಜಾಪತಿಪಿತೃಬ್ರಹ್ಮದೇವ ತೀರ್ಥಾನ್ಯನುಕ್ರಮಾತ್ ॥ (ಯಾಜ್ಞವಲ್ಕ್ಯಸ್ಮೃತಿ)

ಈ ಎರಡು ಶ್ಲೋಕಗಳ ಒಟ್ಟು ತಾತ್ಪರ್ಯ ಹೀಗೆ –

ಆಚಮನ ಮಾಡುವಾಗ ಮತ್ತು ತರ್ಪಣವನ್ನು ಕೊಡುವಾಗ ಬಲಗೈ ಹೇಗಿರಬೇಕೆಂಬುದನ್ನು ಇಲ್ಲಿ ತಿಳಿಸಲಾಗಿದೆ. ಬಲ ಅಂಗೈಯ ಒಂದಾನೊಂದು ಆಕೃತಿವಿಶೇಷಕ್ಕೆ ಇಲ್ಲಿ ತೀರ್ಥವೆಂದು ಹೆಸರು. ಇದು ಬ್ರಾಹ್ಮತೀರ್ಥ, ದೇವತೀರ್ಥ, ಋಷಿತೀರ್ಥ, ಪಿತೃತೀರ್ಥ – ಎಂದು ನಾಲ್ಕು ವಿಧ.

ಅಂಗೈಯನ್ನು ಮೇಲ್ಮುಖವಾಗಿ ಹಿಡಿದು ಅಂಗುಷ್ಠದ ತುದಿಯನ್ನು ಮಧ್ಯಮಾಂಗುಲಿಯ ನಡುವಿಗೆ ಮುಟ್ಟಿಸಿದಾಗ ಬ್ರಾಹ್ಮತೀರ್ಥವೆನಿಸುತ್ತದೆ. ಹೀಗೆ ಹಿಡಿದುಕೊಂಡು ಜಲಪ್ರಾಶನ ಮಾಡಿದರೆ ಅಂಗುಷ್ಠ ಮೂಲಕ ತಳದಿಂದ ಜಲವು ನಮ್ಮ ಬಾಯಿಗೆ ಬೀಳುತ್ತದೆ. ಈ ಬ್ರಾಹ್ಮತೀರ್ಥದಿಂದ ಆಚಮನ ಮಾಡಬೇಕು.

ಎಲ್ಲ ಬೆರಳುಗಳನ್ನು ಜೋಡಿಸಿ ಅಂಗೈಯನ್ನು ಕೆಳಕ್ಕೆ ಸ್ವಲ್ಪ ಬಾಗಿಸಿದರೆ ದೇವತೀರ್ಥವಾಗುತ್ತದೆ. ಇದರಿಂದ ದೇವತೆಗಳಿಗೆ ತರ್ಪಣವನ್ನು ಕೊಡಬೇಕು. ಆಗ ಬೆರಳುಗಳ ತುದಿಯಿಂದ ಜಲವು ಕೆಳಗೆ ಸುರಿಯುತ್ತದೆ.

ಕರ್ತನು ತನ್ನ ಎಲ್ಲ ಬೆರಳುಗಳನ್ನೂ ಸ್ವಲ್ಪ ಮಡಿಸಿ, ತನ್ನ ಎಡದಿಕ್ಕಿಗೆ ಬಾಗಿಸಿ ಹಿಡಿದರೆ ಋಷಿತೀರ್ಥವೆನಿಸುತ್ತದೆ. ಆಗ ಹೆಬ್ಬೆರಳು ಮೇಲ್ಮುಖವಾಗಿರುತ್ತದೆ. ಕಿರುಬೆರಳಿನ ಮೂಲದಿಂದ ಜಲವು ಕೆಳಗೆ ಸುರಿಯುತ್ತದೆ. ಇದರಿಂದ ಋಷಿಗಳಿಗೆ ತರ್ಪಣವನ್ನು ಕೊಡಬೇಕು.

ಕರ್ತನು ಅಂಗೈಯನ್ನು ತನ್ನ ಬಲಕ್ಕೆ ತಿರುಗಿಸಿ, ಬೆರಳುಗಳನ್ನು ಸ್ವಲ್ಪ ಮಡಿಸಿ ಹಿಡಿದರೆ ಪಿತೃತೀರ್ಥವೆನಿಸುತ್ತದೆ. ಅಂಗುಷ್ಠವು ಕೆಳಮುಖವಾಗಿರುತ್ತದೆ. ಅಂಗುಷ್ಠ ಮತ್ತು ತರ್ಜನೀ (ತೋರು ಬೆರಳು) ಗಳ ನಡುವಿನಿಂದ ಜಲವು ಕೆಳಗೆ ಸುರಿಯುತ್ತದೆ. ಈ ಕ್ರಮದಲ್ಲಿ ಪಿತೃತೀರ್ಥದಿಂದ ಪಿತೃಗಳಿಗೆ ತರ್ಪಣಾದಿಗಳನ್ನು ನೀಡಬೇಕು.

ಕಾಯತೀರ್ಥವೆಂದರೆ ಪ್ರಜಾಪತಿದೇವತಾಕವಾದ ತೀರ್ಥವೆಂದರ್ಥ. ಕ – ಪ್ರಜಾಪತಿ, ಕಾಯ – ಪ್ರಜಾಪತಿದೇವತಾಕ. ಇದೇ ಋಷಿತೀರ್ಥ. ಮನುಷ್ಯತೀರ್ಥವೆಂದೂ ಇದಕ್ಕೆ ಹೆಸರುಂಟು.

# ಹವ್ಯಕ ಮಹಾಸಭೆಯ ಸೌಲಭ್ಯಗಳು

* ಸುಸಜ್ಜಿತ ಸಭಾಂಗಣ ಮತ್ತು ಅತಿಥಿ ಗೃಹ.
* ವಿದ್ಯಾರ್ಥಿ / ವಿದ್ಯಾರ್ಥಿನಿ ವಸತಿನಿಲಯಗಳು.
* ವಿದ್ಯಾರ್ಥಿ ಪ್ರೋತ್ಸಾಹಧನ, ಪ್ರತಿಭಾ ಪುರಸ್ಕಾರ ಮತ್ತು ಸಾಧಕ ಸಮ್ಮಾನ.
* ವೈವಾಹಿಕ ಮಾಹಿತಿ ಹಾಗೂ ಉದ್ಯೋಗ ಮಾರ್ಗದರ್ಶನ.
* ಬಡವರ ಕಲ್ಯಾಣ ಮತ್ತು ಆರ್ತ ಸಹಾಯ.
* ಪ್ರತಿಬಿಂಬ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ ವೇದಿಕೆ.
* ಹವ್ಯಕ ಮಾಸಪತ್ರಿಕಾ ಪ್ರಕಟಣೆ ಮತ್ತು ಲೇಖನ ಪ್ರಕಾಶನ.
* ಅಂತರ್ಜಾಲದಲ್ಲಿ ಮಹಾಸಭೆಯ ಚಟುವಟಿಕೆಗಳ ಮಾಹಿತಿ.
* ಹವ್ಯಕ ಅಧ್ಯಯನ ಕೇಂದ್ರದ ಚಟುವಟಿಕೆಗಳು.
* ವೈದ್ಯಕೀಯ ಸೇವೆ ಮತ್ತು ಗ್ರಂಥಾಲಯ.
* ಮಹಿಳಾ ಸಂಘಟನೆ ಮೂಲಕ ಪ್ರತಿ ತಿಂಗಳು ಕಾರ್ಯಕ್ರಮ.
* ಶ್ರೀ ಸಿದ್ಧಿವಿನಾಯಕ ದೇವರಲ್ಲಿ ಪೂಜಾ ಕೈಂಕರ್ಯ.
* ಧಾರ್ಮಿಕ ಕಾರ್ಯಕ್ರಮಗಳು ಮತ್ತು ವೇದಾಧ್ಯಯನ.

ಶ್ರೀ ಅಖಿಲ ಹವ್ಯಕ ಮಹಾಸಭೆಯ ಸದಸ್ಯರಾಗಿ,

ಸದಸ್ಯರಲ್ಲದ ಹವ್ಯಕ ಬಂಧುಗಳನ್ನು ಸದಸ್ಯರಾಗುವಂತೆ ಪ್ರೇರೇಪಿಸಿ

